# ವನಿತ

ತಿಂಗಳ ಪತ್ರಿಕೆ ಡಿಸೆಂಬರ್ ೧೯

ಸುಮಂಗಲಿ ಸೇವಾ ಆಶ್ರಮ:
ಅಬಲ ಮಹಿಳೆಯರ ಆಶ್ರಯಧಾಮ

ಬದುಕಿನ ಕೆಲ "ಕ್ಷಣ" ಗಳು

ಕಾಡುವ ಪ್ರಶ್ನೆಗಳು

ನಾ ಕಂಡ ಜರ್ಮನ್ ಮಹಿಳೆ

ಮಹಿಳೆ ಎಚ್ಚೆತ್ತುವ ದಿನಗಳು
ಬರಬೇಕಾಗಿದೆ

# ಮಾನಸ

ಸಂಪುಟ: ೪ ಸಂಚಿಕೆ:೬

ಡಿಸೆಂಬರ್ ೧೯೯೧



ವಿಳಾಸ "ಮಾನಸ ತಿಂಗಳ ಪತ್ರಿಕೆ"
ಪಂಚಾಯಿತಿ ರಸ್ತೆ
ಕಾಡುಗೋಡಿ (ಪೊ)
ಬೆಂಗಳೂರು—560067

ಬಿಡಿಪ್ರತಿ:2 ರೂ.
ಸೂಚನೆ: ವಾರ್ಷಿಕ ಚಂದಾ:20ರೂ.
ಆಜೀವ ಚಂದಾ: 250ರೂ.
ಒಂದು ವಿಶೇಷ ಸಂಚಿಕೆಯೊಂದಿಗೆ
ಒಟ್ಟು ಹನ್ನೊಂದು ಸಂಚಿಕೆಗಳು.
ಹಣವನ್ನು ಬ್ಯಾಂಕ್ ಡ್ರಾಫ್ಟ್, ಎಂ. ಓ.
ಮೂಲಕ ಸ್ವೀಕರಿಸಲಾಗುವುದು.

## ಈ ಸಂಚಿಕೆಯಲ್ಲಿ.. ....



# ಸಂಪಾದಕೀಯ

ಬಿ. ಟಿ. ಎಸ್. ಬಸ್‌ಗಳಲ್ಲಿ ಮಹಿಳೆಯರಿಗೆ ಎಂದು ಬರೆದಿರುವ ಕಡೆಗಳಲ್ಲೆಲ್ಲಾ ಗಂಡಸರೇ ಕೂತುಕೊಳ್ಳುವ ವಿಚಾರ ಬೆಂಗಳೂರಿನಲ್ಲಿ ನಮಗೆ-ನಿಮಗೇನೂ ಹೊಸತಲ್ಲ. ಆದರೆ ಈಗ ರಾಜ್ಯ ಸಾರಿಗೆ ಸಂಸ್ಥೆಯವರು ಹೊಸ ಕಾನೂನೊಂದನ್ನು ಜಾರಿಗೊಳಿಸಿದ್ದಾರೆ. ಆಗಸ್ಟ್ ೫ ರಂದು ಈ ಬಗ್ಗೆ ಹೇಳಿಕೆ ನೀಡಿರುವ ಸಾರಿಗೆ ಸಂಸ್ಥೆಯವರು ಬಿ. ಟಿ ಎಸ್. ಬಸ್‌ಗಳಲ್ಲಿ ಮುಂದಿನ ಸಾಲಿನ ಹದಿನಾರು ಸ್ಥಳಗಳನ್ನು ಮಹಿಳೆಯರಿಗಾಗಿ ಕಾಯ್ದಿಡುವುದಾಗಿ, ಹಾಗೂ ಈ ಕಾನೂನು ಸೆಪ್ಟೆಂಬರ್ ೧, ೧೯೮೧ ರಿಂದ ಜಾರಿಗೊಳಿಸುವುದಾಗಿ ತಿಳಿಸಿರುತ್ತಾರೆ. ಈ ಕಾದಿರಿಸಲಾದ ಸ್ಥಳಗಳಲ್ಲಿ ಒಂದು ಪಕ್ಷ ಗಂಡಸರು ಕೂತಿದ್ದೇ ಆದರೆ ಆಯಾ ಬಸ್‌ಗಳಲ್ಲಿನ ಕಂಡಕ್ಟರ್ ಹಾಗೂ ಡ್ರೈವರುಗಳು ಅವರಿಗೆ ಈ ಕಾನೂನಿನ ಬಗ್ಗೆ ತಿಳಿಸಿ ಎಚ್ಚರಿಸಬೇಕೆಂದು ಸಾರಿಗೆ ಸಂಸ್ಥೆಯವರು ತಿಳಿಸಿರುತ್ತಾರೆ. ಮಹಿಳೆಯರು ಇಲ್ಲದಿದ್ದ ಪಕ್ಷದಲ್ಲಿ ಈ ಸ್ಥಳಗಳಲ್ಲಿ ಗಂಡಸರು ಕೂರಬಹುದಾಗಿದೆ. ಆದರೆ ಹೆಂಗಸರು ಪ್ರವೇಶಿಸಿದೊಡನೇ ಈ ಸ್ಥಳಗಳನ್ನು ಹೆಂಗಸರಿಗೆ ಬಿಟ್ಟು ಕೊಡಬೇಕಾಗುತ್ತದೆ. ಈ ಕಾನೂನನ್ನು ಪಾಲಿಸದೇ ಇದ್ದಲ್ಲಿ ಹತ್ತಿರದ ಪೋಲೀಸ್ ಸ್ಟೇಷನ್‌ಗೆ ಈ ಬಗ್ಗೆ ದೂರು ಕೊಡಬಹುದಾಗಿದೆ.

ಮೀಸಲಾತಿ ಕುರಿತು ಬಹಳಷ್ಟು ಜನ ಗಂಡಸರು ಹುಬ್ಬೇರಿಸಿದರೆ ಅಂತಹ ಆಶ್ಚರ್ಯವೇನಿಲ್ಲ. ಮದ್ರಾಸ್‌ನಲ್ಲಿ ಈ ಕಾನೂನು ಈಗಾಗಲೇ ಜಾರಿಯಲ್ಲಿರುವುದು ಕಂಡುಬರುತ್ತದೆ. ಈ ಮೀಸಲಾತಿ ನಿಜವಾಗಿಯೂ ಮಹಿಳೆಯರಿಗೆ ಬಸ್‌ಗಳಲ್ಲಿ ಸ್ಥಳ ಕಾಯ್ದಿರಿಸುತ್ತದೆಯೋ ಕಾಯ್ದು ನೋಡೋಣ!

# ಸುಮಂಗಲಿ ಸೇವಾ ಆಶ್ರಮ:

## ಅಬಲ ಮಹಿಳೆಯರ ಆಶ್ರಮಧಾಮ

**ಮಧು ನಗರ್ಲೆ**

"ಪರೋಪಕಾರವೇ ಉತ್ತಮೋತ್ತಮವಾದ ಧರ್ಮ" ಎಂಬ ನಂಬಿಕೆಯ ತಳಹದಿ ಮೇಲೆ ಬೆಂಗಳೂರು–ಹೈದರಾಬಾದ್ ರಾಷ್ಟ್ರೀಯ ಹೆದ್ದಾರಿಯ ರಸ್ತೆಯಲ್ಲಿ ಹೆಬ್ಬಾಳ ಕೃಷಿ ಕಾಲೇಜಿನ ಸೆರಗಿಗೆ ಅಂಟಿಕೊಂಡಿರುವ ಚೋಳನಾಯಕನ ಹಳ್ಳಿಯ ಮಣ್ಣಿನ ರಸ್ತೆ ಹಿಡಿದು ಹೊರಟರೆ ಮಂಗಳೂರು ಹೆಂಚಿನ ಮನೆಗಳು ತಲೆ ಮೇಲೆ ಬಂಡೆಗಳನ್ನು ಹೊತ್ತಿಕೊಂಡಿರುವ ದೃಶ್ಯ ಗೋಚರವಾಗುತ್ತಿದ್ದಂತೆ ಬೆಂಗಳೂರು ಪ್ರಾಧಿಕಾರದ ನಕ್ಷೆಯ ಬಲೆಯೊಳಗೆ ಸಿಕ್ಕದೆ ಇರುವ ಆ ಹಳ್ಳಿಯ ಹೃದಯದಲ್ಲಿ ನಿರ್ಮಲ ಮನಸ್ಸಿನ ಕಲ್ಲು ಬಂಡೆಗಳ ಮೇಲೆ ಹೂ ಅರಳಿಸಿರುವ ಸುಮಂಗಲಿ ಸೇವಾ ಆಶ್ರಮವು ಅಬಲ ಮಹಿಳೆಯರ–ದಿಕ್ಕುಕಾಣದವರ ನೆಲೆಯಾಗಿ ಸದಾ ಕೈ ಬೀಸಿ ಕರೆಯುತ್ತದೆ! ಒಳಗಡೆ ಅಡಿ ಇಡುತ್ತಿದ್ದಂತೆಯೇ ಪುಟ್ಟ ಸಸ್ಯ ಕಾಶಿಯೊಂದು ನಿಮ್ಮ ಮನವನ್ನು ಅರಳಿಸುತ್ತದೆ! ಎಡ ಭಾಗದ ಗುಡಿಸಿಲಿನಲ್ಲಿ ಧ್ಯಾನಮಂದಿರ ನಿಮ್ಮನ್ನು ಮೂಕವಿಸ್ಮಿತರನ್ನಾಗಿಸುತ್ತದೆ. ಬತ್ತಿದ ಹೆಂಗಳೆಯರ ಹೃದಯದಲ್ಲಿ ಬದುಕಿನ ಚಿಲುಮೆ ಚಿಮ್ಮಿಸುತ್ತದೆ. ಕೃತಕದ ಜಾತಿ ಮತ, ಧರ್ಮ, ಲಿಂಗ ಭೇದವಿಲ್ಲದೆ ಸಮ್ಮೋಹನ ನಗೆ ಸೂಸಿ ಅಪರಿಚಿತರನ್ನು ಕ್ಷಣದಲ್ಲಿಯೇ "ಸುಮಂಗಲಿ"ಯ ಬಂಧುಗಳಂತೆ ಮಾಡುವ ಗುಣ ಧರ್ಮ ಸುಮಂಗಲಿಯ ಒಡಲೊಳಗಿದೆ!

### ಸುಮಂಗಲಿ ಸೇವಾ ಆಶ್ರಮ ಏನು?

"ಸುಮಂಗಲಿ ಹೆಸರೇ "ಮಹಿಳೆ" ಪದ ಅನಾಥ ಮಹಿಳೆಯರ ಬದುಕಿಗೆ ಆಸರೆ ನೀಡಿ ಅವರ ಬಾಳ್ವೆಗೆ ಮಾರ್ಗದರ್ಶನ ತೋರಿಸಿ ಈ ಸಮಾಜದಲ್ಲಿ ಅವರು ದೇಶದ ಪ್ರಜೆ ಎಂಬ ಭಾವನೆಯುಂಟು ಮಾಡುವುದೇ ಆಗಿದೆ ಸೇವಾ ಆಶ್ರಮ ಅನೇಕ ಮಹಿಳೆಯರ ಅಂದರೆ ದಿಕ್ಕು–ದೆಸೆಯಿಲ್ಲದ ಮಹಿಳೆಯರ ಹಾಗೂ ಸಣ್ಣ–ಪುಟ್ಟ ಪುಟಾಣಿಗಳಿಂದ ಹಿಡಿದು ಮದುವೆಯಾಗುವಂತಹ ವಯಸ್ಸಿನವರೆಗೂ ಆಶ್ರಯ ತಾಣವಾಗಿ ಊಟ, ವಸತಿ, ಶಿಕ್ಷಣ, ಉದ್ಯೋಗ ಹಾಗೂ "ವಿವಾಹ" ವನ್ನು ನೆರವೇರಿಸುವ ಆಶ್ರಯ ಧಾಮವಾಗಿದೆ? ಯಾವುದೇ ರೀತಿಯ ಪ್ರತಿಫಲಾಪೇಕ್ಷೆಯಿಲ್ಲದೆ, ಅಬ್ಬರ ಪ್ರಚಾರವಿಲ್ಲದೆ ಸರ್ಕಾರದ ಕೃಪೆಗೆ ಕೈಯೊಡ್ಡದೆ ಶ್ರದ್ಧೆಯಿಂದ, ಶಿಸ್ತಿನಿಂದ, ತ್ಯಾಗಮಯದ ಲಕ್ಷಣದಿಂದ ೧೫ ವರ್ಷಗಳಿಂದ ಸೇವೆಗೈಯುತ್ತಾ ಬಂದಿದೆ. ಇದರ ಸೇವೆಯನ್ನು ರಾಷ್ಟ್ರ ಹಾಗೂ ರಾಜ್ಯ ಸರ್ಕಾರಗಳು ಪ್ರಶಂಸಿಸಿವೆ.

ಸುಮಂಗಲಿ ಸೇವಾ ಆಶ್ರಮವು ಮಹಿಳೆಯರಿಗಾಗಿ ಹಲವು ಉಪಯುಕ್ತ ಕಾರ್ಯಕ್ರಮಗಳನ್ನು ಯೋಜಿಸಿಕೊಂಡಿದೆ. ಗಾಂಧೀಜಿ ಅಪಾರವಾಗಿ ನಂಬಿದ್ದ "ಕೈ ಮಗ್ಗ ಹಾಗೂ ಗುಡಿ ಕೈಗಾರಿಕೆ"ಯನ್ನು ಮಹಿಳೆಯ ಮನಸ್ಸಿನಲ್ಲಿ ಬಿತ್ತಿ ೬ ತಿಂಗಳವರೆಗೆ ತರಬೇತಿ ಜೊತೆಗೆ ಸ್ವಲ್ಪ ಹಣ ನೀಡಿ ಮುಂದಿನ ಉದ್ಯೋಗದ ದಾರಿಯನ್ನು ತೋರಿಸುತ್ತಿದೆ. ರೇಷ್ಮೆ ಕೈ ಮಗ್ಗ ಹಾಗೂ ಖಾದಿ ಕೈ ಮಗ್ಗದಲ್ಲೂ ತರಬೇತಿ ನೀಡುತ್ತಿದೆ.

ವೇದವಲ್ಲಿ ೩೮ ವಯಸ್ಸಿನವರು. ಹೆಬ್ಬಾಳದ ಕಾಲೋನಿ ಒಂದರಲ್ಲಿ ವಾಸ. ತುಂಬು ಸಂಸಾರದಲ್ಲಿ ಗಂಡನ ದುಡಿಮೆಯಿಂದ ಎಲ್ಲರ ಬುತ್ತಿ ಚೀಲ ತುಂಬುತ್ತಿಲ್ಲ. ಸಂಕಷ್ಟದ ಸ್ಥಿತಿಯಲ್ಲಿ ಸುಮಂಗಲಿ ಮೊರೆ ಹೋದರು. ಈಗ ಖಾದಿ ಕೈ ಮಗ್ಗ ಕಲಿತು ದಿನದ ಊಟಕ್ಕೆ ನೆರವಾಗುವಂತ ಉದ್ಯೋಗ ಸೃಷ್ಟಿಸಿದ ಆಶ್ರಮವನ್ನು ಮನಸಾರೆ ನೆನೆಯುತ್ತಾರೆ.

ಮನೆಯಲ್ಲಿ ಮಹಿಳೆಯರು ಕುಳಿತು, ಮಕ್ಕಳ ಪೋಷಣೆಯ ನಡುವೆಯೂ ಕೆಲಸ ಮಾಡುವಂತ ಕಲೆ ಹೊಲಿಗೆ ಕೆಲಸ ಹಾಗೂ ಕರಕುಶಲ ಕೆಲಸಗಳು ಆಸಕ್ತ ಮಹಿಳೆಯರಿಗೆ ೬ ತಿಂಗಳ ತರಬೇತಿ ಹಣದೊಂದಿಗೆ ಹೊಲಿಗೆಯನ್ನು ಕಲಿಸುತ್ತಾ ಮಾಯಕಟ್ಟೆಯ ಅತಿ ಸುಲಭ ಬೆಲೆಗೆ ಸಿಗುವ ಪದಾರ್ಥಗಳಿಂದ ಆಟದ ಸಾಮಾನು, ಕಸೂತಿ ಕೆಲಸ, ಕಲಾತ್ಮಕವಾಗಿ ಸಿದ್ಧಪಡಿಸಿದ ಉಡುಪುಗಳನ್ನು ತಯಾರಿಸುವ ತರಬೇತಿ ನೀಡಿ ಸರ್ಕಾರದ ನೆರವಿನ ಮುಖಾಂತರ, ಹೊಲಿಗೆ ಯಂತ್ರಗಳನ್ನು ಕೊಡಿಸಿ ಅಲ್ಲಿಯೇ ಉಳಿಯುವವರಿಗೆ ಉಚಿತ ವಸತಿ ಹಾಗೂ ಊಟದ ವ್ಯವಸ್ಥೆಯನ್ನು ಮಾಡುತ್ತಿದೆ!

ಈ ದೇಶದಲ್ಲಿ "ಹೊಟ್ಟೆಗೆ ಹಿಟ್ಟಿಲ್ಲದಿದ್ದರೂ ಸಂತಾನಕ್ಕೆ ಬರವಿಲ್ಲ" ಹೆತ್ತ ಮಕ್ಕಳನ್ನು ಪಾಲಿಸಿ-

ಭಾರತಿ, ಬಾಗೀರಥಿ, ಅರುಂಧತಿ, ವಿಜಯಲಕ್ಷ್ಮಿ ಎಂಬ ಹೆಸರಿನಿಂದ ಹಸುಗಳನ್ನು ಸಾಕಿರುವ ರೀತಿಯು ಮಾನವ-ಪ್ರಾಣಿಯ ಸಂಬಂಧವನ್ನು ಹೇಳುತ್ತಿದೆ. ಅಚ್ಚುಕಟ್ಟು ಸ್ವಚ್ಛ ರೀತಿಯ ಗೋಶಾಲೆಯನ್ನು ನೋಡಿದರೆ ಪ್ರಾಣಿಗಳ ಮೇಲಿನ ಪ್ರೇಮ ಎಂತಹದು ಎಂದು ಎತ್ತಿ ತೋರಿಸುತ್ತದೆ. ಸುಮಾರು ೧೦ರಿಂದ೧೫ ಒಳ್ಳೆಯ ತಳಿ ಹಸುಗಳಿದ್ದು "ಡೈರಿ" ಯೋಜನೆಗೆ ಉಪಯುಕ್ತ ಮಾಹಿತಿ ದೊರೆತಂತೆ ಆಗುತ್ತದೆ! ಇದಲ್ಲದೆ ಸೌರ ಶಕ್ತಿ ಬ ಕೆ, ಗೋಬರ್ ಗ್ಯಾಸ್ ವ್ಯವಸ್ಥೆಯನ್ನು ಕೊಂಡಿದೆ. ಸ್ಕ್ರೀನಿಂಗ್ ಪ್ರಿಂಟಿಂಗ್ ತರಬೇತಿಗಾಗಿ ಪ್ರಯತ್ನಿಸುತ್ತಿದೆ.

ಅಲ್ಲಿನ ಮಕ್ಕಳಿಗೆ ಶಿಕ್ಷಣ ದೊರಕಿಸಲು ತಮ್ಮದೇ ಶಿಕ್ಷಣ ಸಂಸ್ಥೆ ಹಾಗೂ ಹಾಸ್ಟಲ್ ವ್ಯವಸ್ಥೆಯಲ್ಲಿ ಶಿಶುವಿಹಾರದಿಂದ ಹೈಸ್ಕೂಲ್ ಮಟ್ಟದವರೆಗೆ ಶಿಕ್ಷಣ

---

**ಕಣ್ಣು ಕಾಣದಿದ್ದರೂ ಮನಸ್ಸಿನ ಕಣ್ಣಿನಿಂದ ಕುಶಲಕಲೆ:-**

ವಿಜಯ ಕುಮಾರಿಯ ವಯಸ್ಸು 26. ಹುಟ್ಟು ಕುರುಡಿ. ತಂದೆ-ತಾಯಿಗಳಿದ್ದರೂ ತಬ್ಬಲಿ, ಮಣ ಭಾರದಂತಹ ಸಂಸಾರಕ್ಕೆ ವಿಜಯ ಕುಮಾರಿ ಹೊರೆಯಾದಳು. ಕುರುಡಿಯ ಬಗ್ಗೆ ಅನುಕಂಪ ದೊರೆತರೆ ಸಾಕೆ? ಹೊಟ್ಟೆಗೆ ಏನು? ಯಾರೋ 'ಸುಮಂಗಲಿ' ವಿವರ ನೀಡಿದರು. 'ಸುಮಂಗಲಿ' ಯು ಆಶ್ರಯ ನೀಡಿ ಕಣ್ಣಿಲ್ಲದವಳಿಗೆ ರೇಷ್ಮೆಗೂಡಿನಿಂದ ಜಗಜಗಿಸುವ ಹಾರಗಳನ್ನು ತಯಾರಿಸುವ ಕೆಲಸ ಕಲಿಸುತ್ತಿದೆ. ಅಂಥಹ ಬಾಳಿಗೆ ಬದುಕುವ ಬೆಳಕನ್ನು ತೋರಿಸುತ್ತಿದೆ!

---

ಪೋಷಿಸಲಾಗದ, ದುರ್ಭರ ಜೀವನದಲ್ಲಿರುವ ಸಂಸಾರಗಳಿಗೆ ಈ ಸೇವಾ ಆಶ್ರಮ ಶಿಶು ಸಂರಕ್ಷಣಾಲಯ ತೆರೆದು ೩೦-೫೦ ಮಕ್ಕಳಿಗೆ ಸಂರಕ್ಷಣೆ ನೀಡುತ್ತಾ ಉದ್ಯೋಗಿ ಮಹಿಳೆಯರಿಗೆ ಸಹಾಯವಾಗುತ್ತಾ ಬಂದಿದೆ. ಮಕ್ಕಳಿಗೆ ಬೇಕಾಗುವ ಹಾಲು—ಹಣ್ಣು—ಊಟ, ಉಪಹಾರ, ವೈದ್ಯಕೀಯ ಸೌಲಭ್ಯಗಳು, ಆಟ-ಪಾಠಗಳನ್ನು ಸುಮಂಗಲಿಯಲ್ಲಿ ಒದಗಿಸಲಾಗುತ್ತಿದೆ. ಇಂತಹ ಅನೇಕ ಕಾರ್ಯಕ್ರಮಗಳನ್ನು ಆಶ್ರಮವು ಹಮ್ಮಿಕೊಂಡಿದೆ,

**ಗಂಗೆ ಬಾರೆ ಗೌರಿ ಬಾರೆ ......!**

ಈ ಹಾಡನ್ನು ನೆನಪಿಸುವ ರೀತಿಯಲ್ಲಿಯೇ

ನೀಡಿ ಮುಂದಿನ ವಿದ್ಯಾಭ್ಯಾಸ ಬಯಸುವ ವಿದ್ಯಾರ್ಥಿಗಳಿಗೆ ಆಶ್ರಮವೇ ಖರ್ಚು-ವೆಚ್ಚ ಭರಿಸಿ ಓದಿಸುತ್ತಿರುವುದು ಸರ್ಕಾರದ ಶಿಕ್ಷಣದ ವೈಖರಿಯನ್ನು ನಾಚಿಸುವಂತಹದು,

ಅನೇಕ ಸಹಾಯ ಧನ ಹಾಗೂ ಸಮಾಜ ಕಲ್ಯಾಣ ಇಲಾಖೆಯ ವತಿಯಿಂದ ಸಹಾಯ ಪಡೆದುಕೊಂಡು ಸುಮಂಗಲಿ ಸೇವಾ ಆಶ್ರಮದಲ್ಲಿ ಸುಮಾರು ೮೮ ಮಂದಿ ಸಿಬ್ಬಂದಿ ವರ್ಗದವರಿದ್ದು, ಅವರ ಸಂಬಳವು ೩೦೦ — ೨೦೦೦ರವರೆಗೂ ಮುಟ್ಟಿದೆ, ಅಲ್ಲಿನ ಪ್ರತಿದಿನ ಊಟ-ಉಪಹಾರಕ್ಕಾಗಿ ತಗಲುವ ವೆಚ್ಚವು ೧೫೦೦ ರೂ.ಗಳೆಂದು ಅಂದಾಜಿಸಲಾಗಿದೆ, ಇದರ ಕಾರ್ಯ ವೈಖರಿಯನು

ನೋಡಿ ನೆದರ್‌ಲ್ಯಾಂಡಿನ "ರಾಬೋ ಬ್ಯಾಂಕ್ ಫೌಂಡೇಷನ್" ಉಚಿತವಾಗಿ ಕೆಲವು ಮಾದರಿಯ ಕಟ್ಟಡಗಳನ್ನು ಕಟ್ಟಿಸಿಕೊಟ್ಟಿದ್ದಾರೆ.

ಸುಮಂಗಲಿ ಸೇವೆಯನ್ನು ವೃದ್ಧರಿಗೆ ವಿಸ್ತರಿಸುವ ಆಕಾಂಕ್ಷೆಯನ್ನು ಹೊಂದಿದ್ದು ಅವರ ಸೇವೆಯನ್ನು ಮಾಡಲು ಮುಂದಿನ ವರ್ಷವೇ ಆಗುವಂತೆ ಯೋಜನೆಯನ್ನು ಹಾಕಿಕೊಳ್ಳಲಾಗಿದೆ.

"ಸುಮಂಗಲಿ" ಯು ಮಹಿಳೆಯರಲ್ಲಿ ಜಾಗೃತಿ ಮೂಡಿಸುವುದರ ಜೊತೆಗೆ ಅಭದ್ರತೆ, ಅಬಲ ದಿಕ್ಕಿಲ್ಲದ ಮಹಿಳೆಯರ ಪಾಲಿಗೆ "ತಾಯಿ" ಯಂತೆ ಕಂಡರೂ ಸರಿಯೆ.

ಸುಮಂಗಲಿಯ ಸೃಷ್ಟಿಯ ರಹಸ್ಯದ ಕಥೆ ಏನು?

ಸುಮಂಗಲಿಯ ಜನನ ಒಂದು ಹೆಣ್ಣಿನ ಚಿಂತನ ಚಿಲುಮೆ. ಮಹಿಳೆಯರ ದುಃಸ್ಥಿತಿಯನ್ನು ಒಡಲಿನಲ್ಲಿಟ್ಟು "ಸಮಾಜ ಸೇವೆ"ನನ್ನ ಉಸಿರು ಎಂದು ನಂಬಿ, ಇದ್ದ ಕೆಲಸವನ್ನು ಕೊನೆಗೆ ಗಂಡನಿಂದಲೂ ವಿಮುಕ್ತಿ ಪಡೆದ ದಿಟ್ಟ ಹಾಗೂ ಸಮಾಜ ಪರಿವರ್ತನೆ ಛಲ—ಎಂದ ಹೆಣ್ಣಿನ ಶ್ರಮದ ಫಲವೇ ಸುಮಂಗಲಿ ಸೇವಾ ಆಶ್ರಮ. ಯಾರೀ ಮಹಿಳೆ? ಬೆಳ್ಳಕ್ಕಿ ಉಡುಪಿನ, ಗಿಡ್ಡ ಮೂಗು, ಹೊಳಪು ಕಂಗಳು, ಗುಂಗುರು ಕೂದಲಿನ ಯಂತ್ರದ ಚಟುವಟಿಕೆ, ಮೃದು ಮಾತಿನ "ಅಮ್ಮ" ನೇ ಇವರ ಸ್ಥಾಪಕಿ ಅರ್ಥಾತ್ ಹಡೆದವ್ವ.

೩೩ ವರ್ಷಗಳ ಹಿಂದಿನ ಕತೆ. ಅಂದಿನ ರೆಂಕೋ ಇಂದಿನ ಬಿ. ಎಚ್. ಇ. ಎಲ್. ಕಾರ್ಖಾನೆಯಲ್ಲಿ ಸಾಮಾನ್ಯ ಕಾರ್ಮಿಕಳಾಗಿದ್ದ ಸುಶೀಲಮ್ಮ "ಸಮಾಜ ಸೇವೆ"ಯ ಕನಸುಗಳನ್ನು ಮಡಿಲಲ್ಲಿ ತುಂಬಿಕೊಂಡು ಕಾಲ ಸವೆಸುತ್ತಿದ್ದು "ಸಮಾಜ ಸೇವೆ" ಯೊಳಕೆಯುಂ ಬೆಳೆಯುತ್ತಾ ಬೆಳೆಯುತ್ತಾ ಸಂಸಾರದ ಪರಿತ್ಯಾಗ, ಚಾಮರಾಜ ಪೇಟೆಯಲ್ಲಿ "ಸುಮಂಗಲಿ" ಯನ್ನು ಅಂಕುರಿಸಿ ೧೯೭೫ ರಲ್ಲಿ ಚೋಳನಾಯಕನಹಳ್ಳಿಯ ಹೃದಯದಲ್ಲಿ ನೆಟ್ಟು, ನಿಸ್ವಾರ್ಥ ಸೇವೆ, ಸಹಕಾರ ಮನೋಭಾವ ಪ್ರಾಮಾಣಿಕ ಕಾಳಜಿಯಿಂದ ೧೫ ವರ್ಷಗಳನ್ನು ಸಲ್ಲಿಸುತ್ತಾ ಬಂದು "ಸಮಾಜ ಸೇವೆ" ಯಲ್ಲಿ ನಿಷ್ಣಾತರೆಂದು ರಾಷ್ಟ್ರ ಪ್ರಶಸ್ತಿ ಹಾಗೂ ರಾಜ್ಯದ "ರಾಜ್ಯ ಪ್ರಶಸ್ತಿ" ಯನ್ನು ಬಗಲಿನಲ್ಲಿ ಇರಿಸಿಕೊಂಡಿದ್ದರೂ "ತನ್ನ ಶ್ರಮ ಅಲ್ಪ" ಎನ್ನುವ "ಸುಶೀಲಮ್ಮ" ಸುಮಂಗಲಿ ಸೇವಾ ಆಶ್ರಮದ ಲಲನೆಯರ ನಾಲಿಗೆಯಲ್ಲಿ "ಅಮ್ಮ" "ಅಮ್ಮ" ಆಗಿ ಇದೇ ಆಶ್ರಮವೇ "ಅಮ್ಮ" ಪ್ರತಿಧ್ವನಿಯಾಗಿದ್ದಾರೆ! ಹಲವು ಆಸೆಗಳನ್ನು ಕಣ್ಣಿನಲ್ಲಿರಿಸಿಕೊಂಡಿರುವ "ಅಮ್ಮ" "ಆತ್ಮೀಯತೆ ಕೊಳ" ಪ್ರತಿನಿತ್ಯ ಬರುವ-ಹೋಗುವ ಸಂದರ್ಶಕರು, ಗೌರವಾನ್ವಿತರು, ಸಂಘ ಸಂಸ್ಥೆಗಳು, ಸರ್ಕಾರದವರನ್ನು, ಸವಿಮಾತು-ನಿರ್ಮಲ ಪ್ರೇಮದಿಂದ ಬಾಚಿ ತಬ್ಬುತ್ತಾ ಬಂದವರ ಮನದಲ್ಲಿ ನಿಲ್ಲುತ್ತಾರೆ. ಆಶ್ರಮದ ಪ್ರತಿಯೊಂದು ಕೆಲಸವು ನಿಯಮಿತವಾಗಿ-ನಿಖರವಾಗಿ ಜರಗುತ್ತಿರುವಂತೆ ನೋಡಿಕೊಳ್ಳುತ್ತಾರೆ. ಬೆಂಗಳೂರು ನಗರ ಮಹಿಳಾ ವಿವಿದೋದ್ದೇಶ ಸಹಕಾರ ಸಂಘದ ಅಧ್ಯಕ್ಷರೂ ಆಗಿದ್ದು ಸುಮಂಗಲಿ ಸೇವಾ ಆಶ್ರಮದಲ್ಲಿ ಮಹಿಳಾ ಸಂಘ ಒಂದನ್ನು ಸ್ಥಾಪಿಸಿ ಮಹಿಳೆಯರನ್ನ ಆರ್ಥಿಕ, ಸಾಮಾಜಿಕ, ನೈತಿಕವಾಗಿ ಬೆಂಬಲಿಸಲು ಪ್ರಯತ್ನಿಸಿದ್ದಾರೆ!

"ಅಮ್ಮ" ಎಂಬ ಪದವು ಭಾರತೀಯರ ಹೆಮ್ಮೆಯ ಪದವಾಗಿದ್ದು ಮಗುವಿನಂತೆ "ಅಮ್ಮ" "ಅಮ್ಮ" ಎಂದು ಹಂಬಲಿಸುತ್ತಾ ಧಾರಾಕಾರವಾಗಿ ಸುರಿಯುತ್ತಿದ್ದ ಮಳೆಯೊಡನೆ ನೆನೆಯುತ್ತಾ ಸುಮಂಗಲಿ ಆಶ್ರಮದ ಸುಗಮದ ಹಾದಿಯನ್ನು ಅರಸುತ್ತಾ ಹೆದ್ದಾರಿ ಹಿಡಿದ ಗೂಡಿನೊಳಗೆ ಸೇರಿಕೊಂಡೆ.

---

ಅನೇಕ ಶತಮಾನಗಳಿಂದ ಮನುಷ್ಯ ಸಹಜವಲ್ಲದ ಬದುಕನ್ನು ಬದುಕಿ, ವ್ಯಕ್ತಿತ್ವದಮನಕ್ಕೆ ಒಳಗಾಗಿ ಸ್ವಂತಿಕೆಯನ್ನೂ ಕಳೆದುಕೊಂಡ ಮಹಿಳೆಯರು ವೈಚಾರಿಕ ದೃಢತೆಯನ್ನೂ, ಸ್ವಂತಿಕೆಯನ್ನೂ ಬೆಳೆಸಿಕೊಂಡು ತಮ್ಮ ಬೌದ್ಧಿಕ ವಿಕಾಸದ ಹಾದಿಯನ್ನು ಕ್ರಮಿಸುವುದು ತೀರ ಸುಲಭದ ಮಾತಲ್ಲ. ಪರಿಸ್ಥಿತಿ ಹೀಗಿರುವಾಗ, ವಿಚಾರಶಕ್ತಿಯನ್ನು ಸರಿಯಾದ ಜಾಡಿನಲ್ಲಿ ರೂಢಿಸಿಕೊಂಡು, ಬದಲಾಗುತ್ತಿರುವ ಮೌಲ್ಯಗಳನ್ನು ತೂಗಿನೋಡಿ ಅಗತ್ಯ ಬದಲಾವಣೆಗಾಗಿ ಅವರು ಶ್ರಮಿಸುವಂತಾಗಲು ತಕ್ಕ ಮಾನಸಿಕ ಸಿದ್ಧತೆ ಅಗತ್ಯ.

—'ಮೌಲಿಕ ಬದಲಾವಣೆ ಮತ್ತು ಮಹಿಳೆ' ವಿಜಯಾ ದಬ್ಬೆ

---

# ಅಕ್ಕ ಪಕ್ಕ

ವಯಸ್ಸಿನೊಂದಿಗೆ ಒಂದು ರೀತಿಯ ಒತ್ತಡ ಒಳಗೇ ಕಟ್ಟಿಕೊಳ್ಳುತ್ತದೆ. ವಯಸ್ಸಾದಂತೆ, ಇನ್ನು ಹೆಚ್ಚು ಕಾಲ ಅವಕಾಶವಿಲ್ಲವೆಂದು ಅರಿವಾಗುತ್ತದೆ.

ಮಾರ್ಟಿನಾ ನವ್ರಟಿಲೋವಾ
ವಿಂಬಲ್ಡನ್ ಸೆಮಿಫೈನಲ್‌ನಲ್ಲಿ ಕ್ಯಾಪ್ರಿಯಾಟಿಗೆ ಸೋತಾಗ

ಸಾಕು, ಸಾಕು ನಾನಿನ್ನು ಚಿತ್ರಗಳಲ್ಲಿ ಅಭಿನಯಿಸಲಾರೆ. ನನಗಿನ್ನು ಸಿನಿಮಾ ಬೇಕಿಲ್ಲ.

ಅಶ್ವಿನಿ ನಾಚಪ್ಪ.

ಹಿಂಸೆಯ ಪ್ರಚೋದನೆಗೆ ಕಾರಣವಾದರೂ ಏನು? ಆಮರಣಾಂತ ನಿರಶನ ಏನಾಯಿತು? ಸ್ತ್ರೀಯರು ಮುಖ್ಯಮಂತ್ರಿಯಾಗುವುದನ್ನ, ಅದರಲ್ಲೂ ನಾನು ಮುಖ್ಯಮಂತ್ರಿಯಾಗುವುದನ್ನು ಕೆಲವರು ಸಹಿಸುವುದೇ ಇಲ್ಲ.

ಜಯ ಲಲಿತ.
ತಮಿಳುನಾಡಿನ ಮುಖ್ಯಮಂತ್ರಿ.

'ಬಿಚ್ಚಲಾರೆ' ಎನ್ನುವ ನನ್ನ ನೀತಿಯನ್ನು ನಾನು ಪಾಲಿಸಿಕೊಂಡು ಹೋಗುವ ರೀತಿಯನ್ನು ನೋಡಿದರೆ ನನಗೆ ಸಧ್ಯದಲ್ಲೇ 'ಸನ್ಯಾಸಿನಿ' ಪಾತ್ರಕ್ಕೆ ಹಲವಾರು ಬೇಡಿಕೆಗಳು ಬರಬಹುದು.

ರವೀನಾ ಟಂಡನ್.
ಚಿತ್ರನಟಿ.

ಪುರುಷನನ್ನು ವೈಭವೀಕರಿಸುವುದು, ಹಾಗೆಯೇ ಆದಿಶಕ್ತಿ ಎಂದು ಸ್ತ್ರೀಯ ವೈಭವೀಕರಣ ನಡೆಯುತ್ತಾ ಆಗುವ ಶೋಷಣೆ ತಪ್ಪಬೇಕು. ಸ್ತ್ರೀ-ಪುರುಷರ ನಡುವಿನ ಸಂಬಂಧದಲ್ಲಿ ಸಮಾನತೆ ಎಂಬ ಮಾತನ್ನು ರಾಜಕೀಯ ಸಿದ್ಧಾಂತದ ದೃಷ್ಟಿಯಲ್ಲಿ ಅರ್ಥಮಾಡುವುದು ಸರಿಯಲ್ಲ. ಸುಖಮಯವಾದ ಬದುಕಿಗೆ ಪರಸ್ಪರ ಸಹಭಾಗಿಗಳಾಗುವುದಷ್ಟೆ ಮುಖ್ಯ.

ಪ್ರೊ. ಜಿ. ಎಸ್. ಸಿದ್ಧಲಿಂಗಯ್ಯ.
ಕ. ಸಾ. ಪ ಅಧ್ಯಕ್ಷ.

ಪುರುಷ-ಸ್ತ್ರೀಯರಲ್ಲಿ ಯಾರೂ ಪ್ರಧಾನರಲ್ಲ ಎಂಬ ಮನೋಭಾವ ವ್ಯಾಪಕವಾಗಿರುವ ಐತಿಹಾಸಿಕ ಘಟ್ಟ ತಲುಪಿದ್ದೇವೆ. ಸ್ತ್ರೀವಾದದ ಬಗೆಗಿನ ಪಾಶ್ಚಾತ್ಯ ವಿಚಾರಗಳನ್ನು ಸಾರಾಸಗಟಾಗಿ ಅನುಕರಿಸುವ ಬದಲು ಭಾರತೀಯ ಸಾಮಾಜಿಕ ಹಿನ್ನೆಲೆಯಲ್ಲಿ ಸಮಾನತೆ ಸಾಧಿಸುವ ದಿಕ್ಕಿನಲ್ಲಿ ಆಲೋಚಿಸಬೇಕಿದೆ.

ಹೇಮಲತಾ ಮಹಿಷಿ.

ಪಾಶ್ಚಾತ್ಯ ದೇಶಗಳಲ್ಲಿ ಹಾಗೂ ನಮ್ಮಲ್ಲಿ ಇರುವ ಸಮಸ್ಯೆಗಳ ತೀವ್ರತೆ ಭಿನ್ನವಾಗಿರಬಹುದಾದರೂ, ಸಾಮ್ಯತೆಯಂತೂ ಇರುತ್ತದೆ. ನಮ್ಮ ವಿಚಾರಗಳನ್ನು ವಿಸ್ತರಿಸುವಂತಹ ಆಲೋಚನೆ ಎಲ್ಲಿಂದ ಬಂದರೂ ಸ್ವಾಗತಾರ್ಹ. ಅಸಮಾನತೆ, ಶೋಷಣೆ, ತಪ್ಪಬೇಕೆಂಬುದೇ ಸ್ತ್ರೀವಾದದ ಉದ್ದೇಶ, ಗುರಿಯಾಗಿದೆ.

ಡಾ. ವಿಜಯಾ ದಬ್ಬೆ.

ದೇಶದ ಸಾಕ್ಷರತಾ ಮಟ್ಟದಲ್ಲಿ ಶೇಕಡಾ ಒಂದರಷ್ಟು ಏರಿಕೆಯೂ ರಾಷ್ಟ್ರೀಯ ಆದಾಯ ಅಪಾರ ಹೆಚ್ಚಳಕ್ಕೆ ಕಾರಣವಾಗುತ್ತದೆ. ಮಹಿಳಾ ಶಿಕ್ಷಣಕ್ಕೆ ಹೆಚ್ಚಿನ ಗಮನ ಅಗತ್ಯ.

ಎಂ. ವೀರಪ್ಪ ಮೊಯ್ಲಿ.
ಶಿಕ್ಷಣ ಸಚಿವ.

ಪಾತ್ರ ರಚನೆಯ ಸಂದರ್ಭದಲ್ಲಿ ಹೆಣ್ಣನ್ನು ಪ್ರತ್ಯೇಕಿಸಿ ನೋಡುವ ಬಗ್ಗೆ ನನ್ನ ತೀವ್ರ ವಿರೋಧ ಇದೆ. ಯಾವುದೇ ಒಂದು ಪಾತ್ರವನ್ನು ಆಯಾ ಸನ್ನಿವೇಶದ ಹಿನ್ನೆಲೆಯಲ್ಲಿ ದೃಷ್ಟಿಸುತ್ತೇನೆಯೇ ಹೊರತು ಹೆಣ್ಣು ಪಾತ್ರಕ್ಕೆ ಎಂದೂ ವಿಶೇಷ ರಿಯಾಯಿತಿ ನೀಡಲಾರೆ. ಕೃತಿಗಳಲ್ಲಿ ಹೆಣ್ಣನ್ನು ಎಂದೂ ಪ್ರಜ್ಞಾಪೂರ್ವಕವಾಗಿ ಮೇಲೆ ಕೂರಿಸಲಾರೆ. ವಿಶೇಷ ಮಾನ್ಯತೆ ನೀಡಲಾರೆ. ಕೃತಿಯ ವಸ್ತುವಿಗೆ ಹೊಂದಿಕೊಂಡಂತೆ ಯಾವುದೇ ಪಾತ್ರವನ್ನು ಸಹಜ ರೀತಿಯಲ್ಲಿ ಬಿಂಬಿಸಿದಾಗ ಮಾತ್ರ ಅದಕ್ಕೆ ಬೆಲೆ.

ಶಶಿ ದೇಶಪಾಂಡೆ.

# ಬದುಕಿನ ಕೆಲ "ಕ್ಷಣ" ಗಳು

ಬಸ್ಸಿನಲ್ಲಿ ಸ್ವಲ್ಪ ರಷ್ ಇತ್ತು. ತುಂಬ ಮುಂದೆ ನಿಂತಿದ್ದವಳು ಹಿಂತಿರುಗಿ ನೋಡಿರಲಿಲ್ಲ. ಹೇಗೂ ಅಲ್ಲಿದ್ದವರೇ ಸಮೀಪದಲ್ಲಿ ಖಾಲಿಯಾದ ಸೀಟ್‌ಗಳನ್ನು ಅಡ್ಜಸ್ಟ್ ಮಾಡಿಕೊಳ್ತಾರೆ ಎಂದು ಕೊಂಡು. ಅಷ್ಟರಲ್ಲಿ ಯಾರೋ ಕರೆದಂತಾಯ್ತು. ಹಿಂತಿರುಗಿ ನೋಡಿದೆ. "ಬನ್ರೀ ಇಲ್ಲಿ ಜಾಗ ಇದೆ" ಎಂದು ಒಬ್ಬಾಕೆ ಕೈ ಬೀಸಿದರು. ಯಾರೀಕೆ? ನೋಡಿದ ನೆನಪೇ ಇಲ್ಲವಲ್ಲ ಎಂದುಕೊಳ್ಳುತ್ತಾ ಆಕೆಯ ಪಕ್ಕದಲ್ಲಿ ಕುಳಿತೆ. ಆ ಸೀಟಿನ ಬಳಿಯೇ ನಿಂತಿದ್ದ ಮನುಷ್ಯ ಕೆಕ್ಕರಿಸಿಕೊಂಡು ನೋಡುತ್ತಿದ್ದ. "ಕೂತಿರೋದು ನೋಡಿದ್ರೆ ಗಂಡಸರ ಸೀಟಿನಲ್ಲಿ. ಅದೇ ನಾವೇನಾದ್ರೂ ಹೆಂಗಸರ ಸೀಟಿನಲ್ಲಿ ಕೂತ್ರೆ, ಗಂಡಸ್ರನ್ನ ಕರೆದ್ರೆ ಸುಮ್ನಿರ್ತಾರಾ ಇವರು?" ಎಂದು ತನ್ನ ಸೈನಾತಿಯೊಂದಿಗೆ ಹೇಳಿಕೊಳ್ಳುತ್ತಿದ್ದ. ಆ ಮಾತು ಕಿವಿಯ ಮೇಲೆ ಬಿದ್ದರೂ ಸುಮ್ಮನೆ ನಸು ನಕ್ಕರು ಆ ಮಹಿಳೆ.

ಕೆಲವು ಸಮಯದ ನಂತರ ಆಕೆಯೇ "ಎಲ್ಲಿ ಗೋಗ್ಬೇಕು?" ಎಂದು ಕೇಳಿದರು. ಹೇಳಿದೆ. ಹಾಗೇ ಮಾತುಕತೆ ಮುಂದುವರಿಯಿತು. ಸ್ವಲ್ಪ ಹೊತ್ತಿನಲ್ಲೇ ಆತ್ಮೀಯರೂ ಆದರು. ಮಾತಿನ ಮಧ್ಯೆ ನಾವು ಸ್ತ್ರೀಯರನ್ನು ಕುರಿತಂತೇ ಪತ್ರಿಕೆ ಪ್ರಕಟಿಸುತ್ತಿರುವ ವಿಷಯ ತಿಳಿಸಿದಾಗ ಆಕೆ ಕಣ್ಣರಳಿಸಿ, "ತುಂಬ ಒಳ್ಳೆ ಕೆಲಸ ಮಾಡ್ತಿದೀರಿ. ಪಾಪ! ಎಷ್ಟೋ ಹೆಣ್ಮಕ್ಕಳಲ್ಲಿ ಬುದ್ಧಿವಂತಿಕೆ ಇರುತ್ತೆ ಆದರೆ ಧೈರ್ಯ ಇರೋಲ್ಲ ನೋಡಿ. ಅದಕ್ಕೆ ಸಾವೇ ಎದುರಿಗೆ ಬಂದ್ರೂ ಅವರು ಬದುಕುವ ಧೈರ್ಯ ಮಾಡದೇ ಸತ್ತರೆ ರಗಳೆ ಇರೋಲ್ಲ ಅಂತ ತಿಳ್ಕೋತಾರೆ. ಅಂಥವರಿಗೆ ಆಗ ಧೈರ್ಯ ಹೇಳೋಂಥವರು ಯಾರಾದ್ರು ಸಿಕ್ಕಿ, ಅವರಲ್ಲಿ ಆತ್ಮ ವಿಶ್ವಾಸ ಹುಟ್ಟಿಸಿದ್ರೆ, ಸಾಯೋ ಹೆಣ್ಮಕ್ಕಳ ಸಂಖ್ಯೆ ಕಮ್ಮಿಯಾಗುತ್ತೆ" ಎಂದು ಸುಮ್ಮನಾದರು.

ಸ್ವಲ್ಪ ಹೊತ್ತು ಮೌನದಿಂದ ಕುಳಿತಿದ್ದ ಆಕೆ ಮತ್ತೆ ನನ್ನೆಡೆಗೆ ತಿರುಗಿ, "ನಾನು ಯಾಕೆ ಸಾವಿನ ವಿಷಯ ಎತ್ತಿದೆ ಅಂತ ನಿಮಗನಿಸಲ್ವಾ?" ಎಂದು ಪ್ರಶ್ನಿಸಿದವರು, ನನ್ನ ಉತ್ತರಕ್ಕೆ ಕಾಯದೆ, "ಯಾಕೇಂದ್ರೆ ನಾನು ಒಂದು ಸಲ ಆತ್ಮಹತ್ಯೆಗೆ ಪ್ರಯತ್ನಿಸಿದ್ದೆ. ಆದರೆ ಸಾಯದ ಉಳಿದುಕೊಂಡು ನನ್ನನ್ನ ಆಡಿಕೊಂಡು ನಗುತ್ತಿದ್ದವರ ಮುಂದೆ ತಲೆ ಎತ್ತಿ ಸ್ವತಂತ್ರವಾಗಿ ಬದುಕುತ್ತಿದ್ದೇನೆ" ಎಂದರು. ತಮ್ಮ ಜೀವನದ ಪರಿಚಯ ಮಾಡಿಸಿದರು.

ಆಕೆ ಹಳ್ಳಿಯಲ್ಲಿ ಹುಟ್ಟಿದವರು. ವಿದ್ಯೆ ಆ ಊರಿನ ಪ್ರಾಥಮಿಕ ಶಾಲೆಯಲ್ಲಿ ಎಷ್ಟು ಕಲಿಸುತ್ತಿದ್ದರೋ ಅಷ್ಟೆ. ಸ್ವಲ್ಪ ಜಮೀನು ಇದ್ದುದರಿಂದ ಮನೆಯಲ್ಲಿ ದನ, ಕರುಗಳೂ ಇದ್ದುದರಿಂದ ಸದಾ ಕೆಲಸ ಕೆಲಸ. ಮುಂದೆ ಮದುವೆಯೂ ಆಯಿತು. ಎರಡು ಮಕ್ಕಳೂ ಆದವು. ನಂತರವೇ ಪ್ರಾರಂಭವಾದದ್ದು ಗಂಡನ ಕಾಟ. ಸಹವಾಸ ದೋಷದಿಂದ ಬೇಡದಿದ್ದ ಚಟಗಳೆಲ್ಲ ಅಂಟಿದ್ದವು. ಕುಡಿತ, ಜೂಜು ಹೆಣ್ಣಿನ ಸಹವಾಸ........ಎಲ್ಲ. ಇಷ್ಟೆಲ್ಲ ಇದ್ದ ಮೇಲೆ ಆಸ್ತಿ-ಪಾಸ್ತಿ ಎಲ್ಲ ಹೋಗಿ ಎರಡು ಹೊತ್ತಿನ ಊಟಕ್ಕೂ ಸಂಚಕಾರ ಬಂದೇ ಬಂತು. ಒಮ್ಮೆಯಂತು ಆತ ಈಕೆಯ ಮಾಂಗಲ್ಯವನ್ನೇ ಕಸಿದುಕೊಂಡು ಸಾಯುವಂತೆ ಹೊಡೆದು ವೇಶ್ಯೆಯ ಮನೆಗೆ ಹೋಗಿದ್ದ. ದುಡಿದು ಕುಟುಂಬ ಸಾಕಬೇಕಾಗಿದ್ದ "ಮನೆ ಪುರುಷ" ಹೀಗೆ "ಹಾದಿ ತಪ್ಪಿದ ಮೇಲೆ" ತಾನೇ ಕಟ್ಟಿದ ತಾಳಿಗೂ ಮರ್ಯಾದೆ ಕೊಡದಿದ್ದ ಮೇಲೆ "ಗಂಡ ಸಂಸಾರ, ಮನೆ, ಇದೆಲ್ಲಕ್ಕೂ ಏನರ್ಥ ಎಂದೆನಿಸಿ ತುಂಬ ಬೇಸರವಾಗಿತ್ತು. ಮೈ ಮೇಲಿನ ಗಾಯಕ್ಕಿಂತ ಮಾನಸಿಕ ಗಾಯ ಆಳವಾಗಿತ್ತು. ಸ್ವಭಾವತಃ ಪುಕ್ಕಲು ಸ್ವಭಾವದ ಈಕೆ ಆ ಕಗ್ಗತ್ತಲು ರಾತ್ರಿಯಲ್ಲೂ ನಡೆಯಲಾರದೆ ನಡೆದುಕೊಂಡು ಕೆರೆಯ ಬಳಿ ಬಂದಿದ್ದರು. ದಿನವಿಡೀ ಉಪವಾಸದಿಂದಿದ್ದುದರಿಂದ ಹಾಗೂ ಬಿದ್ದ ಏಟುಗಳಿಂದ ಮುಂದೆ ಹೆಜ್ಜೆ ಇಡಲಾರದೆ ಅಲ್ಲೆ ಕುಸಿದು ಕುಳಿತರು, ಸುಧಾರಿಸಿಕೊಂಡು ಹೋಗುತ್ತೇನೆ ಎಂದು

ಕೊಂಡು, ಕುಳಿತಾಗ, ಸಾಯೋಕೆ ಸುಧಾರಿಸಿಕೊಂಡು ಹೋಗಬೇಕಾ ಅಂದ್ಕೊಂಡೆ ಆ ಹೊತ್ನಲ್ಲೂ ನಂಗೆ ನಗು ಬಂತು" ಎಂದರು. ತಾನು ಸತ್ತರೆ ಈಗಲೇ ನಮ್ಮ ಸ್ಥಿತಿ ನೋಡಿ ನಗುತ್ತಿರುವ ದಾಯಾದಿಗಳಿಗೆಲ್ಲ ಸಂತೋಷ ಆಗ ಆಗುತ್ತೆ. "ಗಂಡ ಖಂಡಿತ ರಿಪೇರಿಯಾಗೋ ಅಂಥವನಲ್ಲ, ತೌರಿನಲ್ಲಿ ಅಯ್ಯೋ! ಇವಳ ಸ್ಥಿತಿ ಹೀಗಾಯಿತೆ ಎಂದು ಕಣ್ಣೀರು ಹಾಕುವ ಹೆತ್ತವರಿಲ್ಲ. ಇನ್ನೇನು ನಾನು ಸತ್ರೂ ಯಾರೂ ಒಂದ್ಹನಿ ಕಣ್ಣೀರು ಹಾಕೋವರಿಲ್ಲ. ಮಕ್ಳಗೆ ತಾನೇ ಹ್ಯಾಗೋ ಬದುಕೊಳ್ತಾವೆ" ಎಂದುಕೊಂಡು ನೀರಿಗೆ ಇನ್ನೇನು ಹಾರಬೇಕು, ಅಷ್ಟರಲ್ಲಿ — "ಮಕ್ಕಳನ್ನು ಸಾಕುವವರ್ಯಾರು?" ಎಂಬ ಪ್ರಶ್ನೆ ಎದುರಾಯಿತು. "ನಾನು ಸತ್ತರೆ ಯಾರೂ ಅಳುವವರಿಲ್ಲದ ಮೇಲೆ ಆ ತಬ್ಬಲಿ ಮಕ್ಕಳ ಗೋಳನ್ನು ಯಾರು ನೋಡ್ತಾರೆ? ಹುಟ್ಟಿಸಿದ ಅಪ್ಪನಿಗಂತೂ ಕೈಯಲ್ಲಿ ದುಡ್ಡಿಲ್ಲದಿದ್ದಾಗಲಷ್ಟೇ ಮನೆ ನೆನಪಾಗುವುದು. ಆ ಮಕ್ಕಳು ಹಸಿವಿನಿಂದ ಅತ್ತರೂ, ಸತ್ತರೂ ಕೇಳುವವರಿಲ್ಲ. ಇಲ್ಲ, ಬದುಕಬೇಕೆಂದರೆ ಭಿಕ್ಷೆ ಬೇಡಬೇಕು ಆ ಎಳೆ ಜೀವಗಳು. ಬದುಕಿದ್ರೂ ಅಷ್ಟೆ ಸತ್ರೂ ಅಷ್ಟೆ, ತಾಯಿಯಾಗಿ ನಾನು ಬದುಕಿ ಹೆದರಿ ಸತ್ತರೆ ನಮ್ಮಿಬ್ಬರಿಗೂ ಏನು ವ್ಯತ್ಯಾಸ ಉಳಿಯಿತು? ಎಂದು ಯೋಚಿಸಿ ಆತ್ಮಹತ್ಯೆಯ ಯೋಚನೆ ಅಲ್ಲಿಗೇ ಬಿಟ್ಟು ವಾಪಸ್ ಬಂದ್ಬಿಟ್ಟೆ" ಎಂದರು.

ಸರಿ, ಮುಂದೇನು ಎಂಬ ಪ್ರಶ್ನೆ ಎದುರಾಯಿತು. ಸಾಲ ಕೇಳಿದರು. ಯಾರೂ ಕೊಡಲಿಲ್ಲ. ಅವರಾದ್ರೂ, ಯಾವ ಧೈರ್ಯದ ಮೇಲೆ ಕೊಡ್ತಾರೆ. ಮನೆಯಲ್ಲಿ ಇದ್ದ ದೊಡ್ಡ ಹಂಡೆಯನ್ನೇ ಅಡ ಇಟ್ಟು ಆ ದುಡ್ಡಿನಲ್ಲಿ ಸಣ್ಣದಾಗಿ ಟೀ ಅಂಗಡಿ ಇಟ್ಟುಕೊಂಡರು. ಅಂಗಡಿ ಎಂದರೇನು — ಬಿಂದಿಗೆ ರಡು ಅಲ್ಯೂಮಿನಿಯಂ ಲೋಟ, ಮನೇಲಿ ಬಳಸದೆ ಹಾಗೇ ಇಟ್ಟಿದ್ದ ಸ್ಟೌವ್ ಒಂದೆರಡು ಪಾತ್ರೆಗಳು ಅಷ್ಟೆ. ಆದರೆ ಈಕೆಯ ಮನೆ ಹೆದ್ದಾರಿಯ ಪಕ್ಕದಲ್ಲಿದ್ದುದರಿಂದ ಪ್ರಯಾಣಿಕರು ತಮ್ಮ ಬಾಯಾರಿಕೆ ತಣಿಸಿಕೊಳ್ಳಲು ಬರಲು ಆರಂಭಿಸಿದರು. ಆಗ ಅದನ್ನು ಆಡಿಕೊಂಡವರೆಷ್ಟು ಮಂದಿ "ಏನು ಯಾಪಾರ ಮಾಡ್ತಾಳೋ ಯಾರಿಗ್ಗೊತ್ತು. ಟೀ ಯಾಪಾರಾನೋ ಅಥ್ವಾ ಬೇರೆ ಯಾಪಾರಾನೋ?" ಎಂಬ ಕೊಂಕು, ಟೀಕೆಗಳಿಗೇನೂ ಬರವಿರಲಿಲ್ಲ. ಕ್ರಮೇಣ ಈ ಟೀಕಾಕಾರರೂ, ವಿಮರ್ಶಕರೂ ಬರಲು ಪ್ರಾರಂಭಿಸಿದರು. ಹೀಗೆ ಮುಂದುವರಿಯುತ್ತಾ ಕ್ರಮೇಣ ಕಾಫಿ, ಟೀಗಳೊಂದಿಗೆ ತಿಂಡಿಯನ್ನೂ ಮಕ್ಕಳ ಸಹಾಯದಿಂದ ಮಾರಾಟ ಮಾಡಲುಪಕ್ರಮಿಸಿದರು. ಮಕ್ಕಳನ್ನೂ ಶಾಲೆಗೆ ಸೇರಿಸಿದರು. ಈಗ ಹೈಸ್ಕೂಲಿಗೆ ಹೋಗುವ ಇಬ್ಬರು ಮಕ್ಕಳಿಗೆ ಅಂಗಡಿ ಇದ್ದರೆ ಓದಲು ಸಮಯ ಸಾಲುವುದಿಲ್ಲ ಎಂದು ವ್ಯಾಪಾರ ಬಿಟ್ಟು ಕೊಡಿಟ್ಟ ದುಡ್ಡಿನಲ್ಲಿ ಎರಡು ಹಸು ತೆಗೆದುಕೊಂಡು ಅದರ ಹಾಲಿನಿಂದ ಜೀವನ. "ಒಳ್ಳೆ ಲಾಭ ಇದೆ, ಆದ್ರೆ ನಾನೊಬ್ಬಳೇ ದುಡೀಬೇಕು, ಮಕ್ಕಳಿಗೆ ಟೈಮಿದ್ರೆ ಅವರೂ ಬರ್ತಾರೆ. ಆದ್ರೂ ಓದೋ ಮಕ್ಕಳಲ್ವಾ ನಾನು ಕೆಲಸಕ್ಕೆ ಕರೆಯುವುದಿಲ್ಲ. ಹಾಗಂತ ದೊರೆ ಮಕ್ಕಳಂತೆ ಬೆಳೆಸಿಲ್ಲ, ಕಷ್ಟಪಟ್ರೆ ಜೀವನ ಅನ್ನೋದು ಆ ಮಕ್ಳಿಗೆ ಗೊತ್ತು ಬಿಡಿ. ಒಬ್ಬ ಹುಡುಗನ್ನ ಕೆಲಸಕ್ಕೆ ಇಟ್ಟುಕೊಂಡು ಇನ್ನೊಂದು ಎಮ್ಮೆ ತಗೋಬೇಕು ಅಂದ್ಕೊಂಡಿದ್ದೀನಿ" ಎಂದು ಹೇಳಿದರು.

"ಆದೇ ಒಂದೊದ್ಸಾರಿ ನಾನಂದ್ಕೊಳ್ತೀನಿ, ನಾನೇನಾದ್ರೂ ಸತ್ತಿದ್ರೆ ಇಷ್ಟೆಲ್ಲಾ ಆಗ್ತಿತ್ತಾ ಅಂತ ನೋಡಿ ಈಗ ನಮ್ಮ ಊರಲ್ಲಿ ನನ್ನನ್ನೇ ಹೊಗಳ್ತಾರೆ "ಧೈರ್ಯ ಅಂದ್ರೆ ನಿನ್ದು ತಾಯಿ" — ಅಂತ ಹೇಳ್ತಾರೆ. ಆದ್ರೆ ಇದೇ ಜನ ಒಂದ್ಕಾಲ್ದಲ್ಲಿ "ಬಜಾರಿ ಗಂಡುಬೀರಿ" ಅಂತೆಲ್ಲ ಹೇಳಿದ್ರು. ಕಾಲ ಹೇಗೆ ಮನುಷ್ಯನ್ನ ಬದಲಾಯಿಸುತ್ತೆ ಅಲ್ವ? ಎಂದರು. "ಹೌದು. ನಿಮ್ಮ ಗಂಡನ ಕಥೆ ಏನಾಯ್ತು" ಎಂದು ನಾನು ಕೇಳಿದೆ. "ಅಯ್ಯೋ ಬಿಡಿ. ಕೈಯಲ್ಲಿ ದುಡ್ಡಿದ್ರೆ ನೆಂಟರು, ಇಷ್ಟರು, ಇಲ್ದಿದ್ರೆ ಯಾರೂ ಇಲ್ಲ. ಮೊದಲು ನಾನು ಆ ಗಲಾಟೆಯಾದ ಮೇಲೆ ಪಟ್ಟು ಹಿಡಿದು ಮನೆಗೇ ಸೇರಿಸ್ಲಿಲ್ಲ. ಕಂಪ್ಲೇಂಟ್ ಕೊಡ್ತೀನಿ ಹಾಗೆ ಹೀಗೆ ಅಂತೆಲ್ಲ ಹಾರಾಡ್ತಿದ್ದ. ಪೊಲೀಸ್ ಸ್ಟೇಷನ್‌ನಲ್ಲಿ ನನ್ನ ಕರೆಸಿದ್ರು. ನಾನು ನನ್ಕಥೆಯೆಲ್ಲಾ ಹೇಳ್ಕೊಂಡೆ. ನನ್ನ ಗಂಡ ಜೂಜಾಡ್ತಿದ್ದುದ್ದೆಲ್ಲ ಅವರಿಗೆ ಗೊತ್ತಿತ್ತಲ್ಲ, ಅದ್ಕೆ ಆ ಸಾಹೇಬ್ರಿಗೆ ಅದೇನ್ ಮನಸ್ಸೋ ಅವನಿಗೇ ಚೆನ್ನಾಗಿ

ಬೈದು "ಈವಮ್ಮನ ತಂಟೇಗೆ ಹೋದ್ರೆ ಪೆರೋಪ್ಲೇನ್ ಹತ್ತಿಸ್ತೀನಿ ನೋಡು" ಎಂದು ದಬಾಯಿಸಿ ಕಳಿಸಿದರು. ಸಣ್ಣ ಪುಟ್ಟ ಕಿರುಕುಳ ಅವನಿಂದ ಇತ್ತು. ಈಗ ೨ ವರ್ಷದ ಹಿಂದೆ ಕುಡಿದದ್ದು ಹೆಚ್ಚಾಗಿ ಪೂರ್ತಿಯಾಗಿ ಸತ್ತೇಹೋದ" ಎಂದರು. "ಪೂರ್ತಿಯಾಗಿ ಸತ್ತೇಹೋದ ಅಂದರೆ........" ಎಂದು ಕೇಳಿದ್ದಕ್ಕೆ ಆಕೆ, "ನೋಡಿ ನನ್ಕತ್ತಿಂದ ತಾಳಿ ಕಿತ್ಕೊಂಡ್ ಹೋದಾಗ ನನ್ನ ಪಾಲಿಗೆ ಮಾತ್ರ ಸತ್ತಿದ್ದ. ಆದ್ರೆ ೨ ವರ್ಷದ ಹಿಂದೆ ನೋಡೋರ ಪಾಲಿಗೂ ಸತ್ತ ಅಷ್ಟೆ" ಎಂದರು. ಅಷ್ಟರಲ್ಲಿ ಆಕೆ ಇಳಿಯುವ ಸ್ಟಾಪ್ ಹತ್ತಿರ ಬಂತು. ಆಕೆ ಮುಂದೆ ಕಣ್ಣು ಹಾಯಿಸಿ, "ಮುಂದೆ ನಿಂತಿರೋ ಆ ಹೆಣ್ಮಗಳನ್ನು ಕಳಿಸ್ತೀನಿ ಸೀಟು ಯಾರಿಗೂ ಬಿಡಬೇಡಿ. ಗಂಡಸ್ರೇನು ಹೇಗಾದ್ರೂ ಇರ್ತಾರೆ. ಹೆಣ್ಮಕ್ಕಳಿಗೇ ಕಷ್ಟ ಆಗೋದು. ನಾನು ಹೆಣ್ಮಗಳಾಗಿ ಪರದೇಶಿಥರ ಇದ್ದು ಸಾಕಷ್ಟು ಅನುಭವಿಸಿದ್ದೀನಿ. ಕಷ್ಟ ಇರೋರಿಗೆ ಸಹಾಯಾನು ಮಾಡ್ತೀನಿ. ಆದ್ರೆ ಹೆಣ್ಮಕ್ಕಳಿಗೇ ಜಾಸ್ತಿ ಮಾಡೋದು ಅಂತ ಮನಸ್ನಲ್ಲಿ ಇಟ್ಕೊಂಡಿದ್ದೀನಿ. ಅದಕ್ಕೆ ನಿಮ್ಮನ್ನ ಕರೆದಿದ್ದು. ಮತ್ತೆ ಗಂಡಸ್ರು ಪಕ್ದಲ್ಲಿ ಕೂತ್ಕೋಬಾರ್ದು ಅಂತ ಮಡಿಯಿಂದ ಅಲ್ಲ. ಅಥವಾ ಗಂಡಸ್ರೆಲ್ಲಾ ಕೆಟ್ಟವರು ಅಂತಲೂ ಅಲ್ಲ. ನನ್ನ ಎರಡೂ ಮಕ್ಕಳೂ ಗಂಡು ಮಕ್ಕಳೇ......." ಎನ್ನುತ್ತಾ ಎದ್ದು ಹೊರಟರು.

ಬದುಕಿನಲ್ಲಿ ಕೆಲ "ಕ್ಷಣ"ಗಳಲ್ಲಿ ಕೈಗೊಳ್ಳುವ ನಿರ್ಧಾರ ಎಷ್ಟು ಮಹತ್ವಪೂರ್ಣವಾಗಿರುತ್ತವೆ. ಎದುರಾದ ಬಿರುಗಾಳಿಗೆ ಅಂಜಿ ಕೈಗೊಳ್ಳುವ "ನಿರ್ಧಾರ"ಗಳು ಓಲಾಡುತ್ತಿರುವ ಬದುಕಿನ ನಾವೆಯನ್ನು ಸುಲಭದಲ್ಲಿ ಮುಳುಗಿಸಿ ಬಿಡಹುದು. ಆದರೆ ಛಲ, ಆತ್ಮಸ್ಥೈರ್ಯದಿಂದ ಕೈಗೊಂಡ ನಿರ್ಧಾರಗಳು ವೈಯಕ್ತಿಕವಾಗಿ ಮಾತ್ರವಲ್ಲ ಬೇರೆಯವರಿಗೂ ಯಾವುದಾದರೂ ರೀತಿಯಲ್ಲಿ ಉಪಯೋಗಕ್ಕೆ ಬಂದೇ ಬರುತ್ತದೆ ಎಂದೆನಿಸಿತು.

ಗೀತಾ ಜಿ. ಎಸ್.

---

ಓದುಗರಲ್ಲಿ ಮನವಿ

ಗಗನಕ್ಕೇರುತ್ತಿರುವ ಮುದ್ರಣ ಕಾಗದದ ಬೆಲೆ, ಅಂಚೆ ವೆಚ್ಚ ಮುಂತಾದವುಗಳಿಂದಾಗಿ ಪತ್ರಿಕೆಯನ್ನು ಪ್ರಕಟಿಸುವುದು ಕಷ್ಟಕರವಾಗಿದೆ. ಮಾನಸಕ್ಕೆ ಆಸಕ್ತಿ ಹಾಗೂ ಪ್ರೋತ್ಸಾಹ ವ್ಯಕ್ತಪಡಿಸಿ ಪತ್ರ ಬರೆಯುವ ಸಹೃದಯರು ಹಾಗೂ ಚಂದಾ ಮುಗಿದಿರುವ ಓದುಗರು ತಕ್ಷಣ ಚಂದಾಹಣ ಕಳಿಸಿದರೆ ಪತ್ರಿಕೆಯನ್ನು ಉಳಿಸಿ ಬೆಳೆಸಲು ನೀರೆರೆದು ಪ್ರೋತ್ಸಾಹಿಸಿದಂತಾಗುತ್ತದೆ. ಓದುಗರೆಲ್ಲರನ್ನು ಉಳಿಸಿಕೊಳ್ಳಬೇಕೆಂದು ನಮ್ಮ ಅಪೇಕ್ಷೆಯಾದರೂ ಉಚಿತವಾಗಿ ಒಂದು ಸಂಚಿಕೆಯನ್ನು ಕಳಿಸಲು ಉಂಟಾಗುವ ಖರ್ಚನ್ನು ಭರಿಸುವುದು ಪತ್ರಿಕೆಗೆ ಹೊರೆಯಾಗುತ್ತದೆ. ಪ್ರಿಯ ಓದುಗರು ಸಹಕರಿಸಿ ತಕ್ಷಣ 20-00 ರೂ ಚಂದಾ ಹಣ ಕಳಿಸಿಕೊಡಬೇಕೆಂದು ಕೋರುತ್ತೇವೆ.

ಸಂ. ಮಂ.

# "ಕಾಡುವ ಪ್ರಶ್ನೆಗಳು"

ನಾನೇಕೆ ಹಾಡುತ್ತಿಲ್ಲ......?
ಮುದ್ದು ಮಾಟದ ಹುಡುಗಿ ಮೊಗ್ಗು ಬಿರಿದು
ಕುಂತಾಗ

ನಾನೇಕೆ ನಗುತ್ತಿಲ್ಲ......?
ವಿದೂಷಕನ ಹಾಸ್ಯಕ್ಕೆ ಸಭಾಂಗಣವೆ ಗಹಗಹಿಸಿ
ನಗುವಾಗ

ನಾನೇಕೆ ನೋಡುತ್ತಿಲ್ಲ......?
ತೇಲು ಹಕ್ಕಿಗಳು ನೋಟಗಳ ತುಣುಕು ತಿವಿ
ತಿವಿದು
ಹನಿನೀರ ಕೊಕ್ಕಿನಲಿ ಹಣಿಸಾಡುವಾಗ

ನಾನೇಕೆ ಕೇಳುತ್ತಿಲ್ಲ......?
ತುಟಿ ಮೀರದ ಹೊಸ ವಡಪುಗಳ;
ವರಸೆಗಳ ಹಿಡಿದಿಡುವ ವೀರಗಾಥೆಗಳ

ನಾನೇಕೆ ಚಿತ್ರಿಸುತ್ತಿಲ್ಲ......?
ಅಂತ್ಯದಂಚಿಗೇ ಅಂಟಿಕೊಂಡ–ಹುಟ್ಟು;
ಬಟ್ಟಲಿನಲ್ಲಿ ಹಾಲುಕ್ಕಿಸುವ ಕಲೆಯ

ನಾನೇಕೆ ಸವಿಯುತ್ತಿಲ್ಲ......?
ಬೆವರಿಂದ ತೊಯ್ದ ಒರಟು ರೊಟ್ಟಿಗಳ
ಅಂತಃ ಸತ್ವದ ರುಚಿಯ

ನಾನೇಕೆ ಕರಗುತ್ತಿಲ್ಲ......?
ಸನಿಹದಲ್ಲೆಲ್ಲೋ ಹತ್ತಿ ಉರಿಯುತ್ತಿರುವ
ಹತ್ಯಾಕಾಂಡಗಳ ದಳ್ಳುರಿಯ ಬಿಸಿಗೆ

ನಾನೇಕೆ ತೆರೆದುಕೊಳ್ಳುತ್ತಿಲ್ಲ......?
ಬಡತಾಯ; ಬತ್ತಿದ ಮೊಲೆಯ ಚೀಪುವ
ಕಂದನ ಬಿಕ್ಕಳಿಕೆಗೆ

ನಾನೇಕೆ ಪ್ರಶ್ನಿಸುತ್ತಿಲ್ಲ......?
ಚೂರಿಗಳ ಅಲುಗಲ್ಲಿ ಬಿಸಿರಕ್ತ–
ಮೆತ್ತಿಕೊಂಡ ಕ್ರೂರತೆಯ ಬಗ್ಗೆ;

ನಾನೇಕೆ ಬರೆಯುತ್ತಿಲ್ಲ......?
ಬಿರುಗಾಳಿಗೆ ಬೆದರಿ–ಹಾರದೆ
ರೆಕ್ಕೆ ಮುದುಡಿ ಕೂತ ಹಕ್ಕಿಗಳ ಬಗ್ಗೆ......?



ನಿರ್ಮಲಾ ಆನವಟ್ಟಿ.

# ಈ ನೆಲದ ಹಾಡು (ಕವನ ಸಂಕಲನ).

ಲೇ. ಉಷಾ.ಸ.
ಸಂವಾದ ಪ್ರಕಾಶನ ಮಲ್ಲಾಡಿಹಳ್ಳಿ
ಚಿತ್ರದುರ್ಗ ಜಿಲ್ಲೆ -೫೭೭೫೦

ಉಷಾ ತಮ್ಮ ಮೊದಲ ಸಂಕಲನ "ತೊಗಲು ಬೊಂಬೆಯ ಆತ್ಮಕಥೆ" ಯ ನೆಲೆಯಿಂದ ತಮ್ಮ ಚಿಂತನೆ ಅಭಿವ್ಯಕ್ತಿಗಳ ಹರಹನ್ನು "ಈ ನೆಲದ ಹಾಡು" ಆಗಿಸಲು ವಿಸ್ತರಿಸಲು ಯತ್ನಿಸುವುದನು ಇದರಲ್ಲಿನ ಕವನಗಳು ಸಾಬೀತುಪಡಿಸಿವೆ. ಹೆಣ್ಣಿನ ಮನದಾಳದ ಹಿಗ್ಗು, ನೋವು, ಆತಂಕ, ನಿರೀಕ್ಷೆ, ವಿಷಾದ ಮತ್ತು ಶುಭದ ಭವಿಷ್ಯತ್ತಿಗಾಗಿ ಕಾಯುವ ವಸ್ತು ಈ ಸಂಕಲನದುದ್ದಕ್ಕೂ ಇದ್ದು, ಇದೇನೂ ಉಷಾ ಅವರಿಗೆ ಹೊಸದಲ್ಲ. ಆದರೆ ಹೊಸತನ ಇರುವುದು ಇಂಥ ವಸ್ತುವನ್ನು ಕವಿ ನಿರೀಕ್ಷಿಸುವ ಕ್ರಮದಲ್ಲಿ. ಇಲ್ಲಿ ಕೇಳುವ ಹೆಣ್ಣಿನ ದನಿ ಒಬ್ಬಳದಲ್ಲ, ಹಲವರಿಗೆ ಪ್ರತಿನಿಧಿಯಾಗ ಹೊರಟಾಕೆಯದು. ಈ ಪ್ರಾತಿನಿಧಿಕತೆಗೆ ಹೆಣ್ಣಿನ ಸುದೀರ್ಘ ಇತಿಹಾಸದ ಜೋಡಣೆಗ ಅವರು ಯತ್ನಿಸುತ್ತಾರೆ:

"ಅಂದಿಗೂ ಇಂದಿಗೂ | ಕಾಲದ ನಂತರದಲ್ಲಿ ತೇಲುತ್ತಿದ್ದ ಹುಡುಗಿ | ಸುಖದ ತುತ್ತು ತುತ್ತಿಗೂ ಕಲ್ಲಾಗಿ | ಕಾದಿದ್ದಾಳೆ" (ನಿರಂತರ)

ಈ ಕಾಯುವ ಹುಡುಗಿ ಹೆಸರಿಲ್ಲದ ಅನೇಕ ಹೆಣ್ಣುಗಳ ದನಿ ಪಡೆಯಬಹುದು ಅಥವಾ ಹೆಸರಾಂತ ಪ್ರತೀಕಗಳಾದ ಸೀತೆ, ವಿನುತೆ, ಮಹಾಶ್ವೇತೆ, ದಮಯಂತಿ, ಶಕುಂತಲೆ, ಅನಾರ್ಕಲಿಯರಾಗಬಹುದು. ಇವರೆಲ್ಲರ ಬದುಕಿನಾಳದ ಸೂತ್ರ, ಶೋಷಿತ ವಾಸ್ತವದ ನೋವು ಮತ್ತು ಅದನ್ನು ಸಹಿಸುತ್ತ ಸುಂದರ ಭವಿಷ್ಯತ್ತಿಗಾಗಿ ಕಾಯುವುದು. ಹೀಗಾಗಿ ಇಲ್ಲಿನ ಎಲ್ಲ ಕವನಗಳ ತುಯ್ದಾಟ "ಚೂಪಾದ ಗ್ರೀಷ್ಮದ ಹುಲುಸೂಜಿ ನಿಜಗಳು" ಮತ್ತು "ಇವನೆಲ್ಲ ಮಿದುಗೊಳಿಸಿ | ನೆಲಕೆಲ್ಲ ಪಚ್ಚೆಯ ನಾಚಿಕೆ ಹೊದ್ದಿಸಿ | ನವಿರೇಳಿಸುವ ಮುಂಗಾರಿಗಾಗಿ" ಕಾಯುವಿಕೆಗಳ ನಡುವೆ ಇದೆಯೆನ್ನಬಹುದು.

ಚೂಪಾದ ಯಾವ ನಿಜಗಳು ಇಲ್ಲಿನ ಸಂಕಟದ ಮೂಲವಾಗುತ್ತವೆ? ಎಂಬುದನ್ನು ನೋಡಬೇಕು.

"ಬಿಸಿಲ ದಾರಿಯಲಿ ಬಸಿರ ಭಾರವ ಹೊತ್ತು | ಹೆಜ್ಜೆ ಹೂ ಸುಟ್ಟಾಗ | ವಿಲಾಸ ಮರೆತ ಮೇನಕೆ" "ತರತರದ ಹಾದರಗಿತ್ತಿ ಮುಳ್ಳುಗಳ ಬೀದಿಯಲಿ | ದವಯಂತಿ ಹಂಸಪಾದಗಳ ಬೆತ್ತಲೆ ನಡಿಗೆ" (ಎಂಭತ್ತರ ಡಿಸೆಂಬರ್)

ನಮ್ಮ ಮಹಿಳಾ ಕವಿಗಳು ಪ್ರಧಾನ ಪರಂಪರೆಯೊಳಗೇ ತಮ್ಮ ಅನನ್ಯತೆಯನ್ನು ಸಾಧಿಸಲು ಯತ್ನಿಸುವಾಗ ತಮ್ಮದೇ ಆದ ಕಾವ್ಯಭಾಷೆಗಾಗಿ ಹುಡುಕಾಡಬೇಕಾದ್ದು ಅನಿವಾರ್ಯವೆಂಬುದನ್ನೂ ಮನಗಾಣಬೇಕಲ್ಲವೆ? ಯಾಕೆಂದರೆ ಉಷಾ ಅವರಂಥವರು ಚಿತ್ರಿಸುವ ನೂರಾರು ಹೆಣ್ಣುಗಳ ನೂರು ವಿಧದ ನೋವುಗಳ ಬೇರಿರುವುದು ಅವರು ಒದುಕುತ್ತಿರುವ ಪಿತೃಪ್ರಧಾನ ವ್ಯವಸ್ಥೆಯ ಲಿಂಗಾಧಾರಿತ ಮೌಲ್ಯಗಳಲ್ಲಿ. ಈ ಮೌಲ್ಯ ಪರಂಪರೆಯಲ್ಲಿ ಶಕುಂತ , ದಮಯಂತಿ ಏನನ್ನು ಪ್ರತಿನಿಧಿಸುತ್ತಾರೋ ಅದಕ್ಕೆ ವಿರುದ್ಧವಾದೊಂದು ಮೌಲ್ಯವೆಂಬಂತೆ "ಹಾದರಗಿತ್ತಿ" ಯರನ್ನು ಕಾಣಲಾಗುತ್ತದೆ. ಆದರೆ ನಿಜವಾದ ಸ್ತ್ರೀಪರವಾದ ನೋಟವೊಂದಕ್ಕೆ ಈ ಎರಡೂ ಒಂದೇ ಒಂದು ಸಮುದಾಯವನ್ನು ಎರಡಾಗಿ ವಿಭಜಿಸುವ ಮೂಲಕ ಪುರುಷ ತನ್ನ ಅಗತ್ಯವನ್ನೇ ಪೂರೈಸಿಕೊಂಡಿರವುದು ಸ್ಪಷ್ಟವಾಗುತ್ತದೆ. ಇವುಗಳಲ್ಲಿ ಕೇವಲ ಮೊದಲಿನದರ ಜೊತೆ ತನ್ಮಯತೆ ಹೊಂದಿ, ಮತ್ತೊಂದರತ್ತ ತಿರಸ್ಕಾರ ತಳೆಯುವುದರಿಂದ ಯಥಾಸ್ಥಿತಿಯ

ಮುಂದುವರಿಕೆಯ ಹೊರತು ತಮ್ಮದೇ ಅನನ್ಯತೆಯ ಶೋಧನೆ ಎಲ್ಲಿ ಹುಟ್ಟೀತು? ಆದ್ದರಿಂದ ಪ್ರಧಾನ ಪರಂಪರೆಯ ಇಂಥ ರೂಢಿಗತ ಪ್ರತೀಕಗಳೊಳಗೆ ತೀವ್ರತೆ ತುಂಬುವುದಾಗಲೀ, ಅಥವಾ "ಬೇನೆಯರಿಯದ ಬಂಜೆಯರು" "ಯಾರ ಕಣ್ಣಲ್ಲೂ ಕರಗದ ಅಮ್ಮನಾಗದ ಆಂಟಿಯರು" ಎಂಬಂಥ ಹಗುರು ಚಿಂತನೆಗಳನ್ನೆರಚುವುದಾಗಲೀ, ಈ ಕವಿಗಳ ಆಶಯಕ್ಕೆ ಸಹಾಯಕವಾಗಬಲ್ಲದೆ? ಇಂಥ ಯತ್ನ ತಾವೇ ಸೃಷ್ಟಿಸಿದ ಭಾಷೆಯ ನವುರಾದ ಬಲೆಯಲ್ಲಿ ತಾವೇ ಸಿಕ್ಕಿಬೀಳುವುದಕ್ಕೆ ಕಾರಣವಾಗಲಾರದೆ? ಹೆಣ್ಣಿನ ಬದುಕಿನ ಇಂಥಿಂಥ ಸ್ಥಿತಿಗೆ ಇಂಥಿಂಥ ಅರ್ಥಗಳು, ಮೌಲ್ಯಗಳೆಂದು ಸಾರುವ ಧೋರಣೆಯನ್ನು ಕವನದಲ್ಲಿ ಕೂಡ ಪ್ರಶ್ನಿಸಲಾಗದಿದ್ದ ಮೇಲೆ, ಇನ್ನು ಅಕ್ಕಮಹಾದೇವಿಯ ಪ್ರತೀಕದಲ್ಲಿ ತಾವೇ ಗುರುತಿಸಿಕೊಂಡಿರದ ಹೆಣ್ಣಿನ ಘನತೆ, ಗೌರವ, ಆತ್ಮಪ್ರತ್ಯಯಗಳು ದಕ್ಕಬಹುದೆ? ಸಶಕ್ತವಾದ ಭಾಷೆ ತನ್ನ ಮೇಲಿರುವ ಪರಂಪರೆಯ ಹೊರೆಯ ಬಗ್ಗೆ ಕಾಳಜಿ ವಹಿಸಲೇ ಬೇಕಾಗುತ್ತದೆಯಲ್ಲವೆ?

ಇಷ್ಟೆಲ್ಲ ಏಕೆ ಹೇಳಬೇಕಾಯಿತೆಂದರೆ, ಉಷಾ ಬಹು ಮಹತ್ವಾಕಾಂಕ್ಷೆಯ ಕವಿಯಾದ್ದರಿಂದ ಅವರ ಅಂಥ ಆಕಾಂಕ್ಷೆಗೆ ಸಂಕಲನದ ಶೀರ್ಷಿಕೆಯ ಕವನದಲ್ಲಿ ಸ್ಪಷ್ಟ ನಿರ್ದೇಶನವಿದೆ. "ಈ ನೆಲದ ಹಾಡು" ಕವನ ಓದತೊಡಗಿದಂತೆಯೇ ಅಡಿಗರ "ಭೂಮಿಗೀತ" ದ ಸುಂದರ "ತದ್ಭವ" ಎನಿಸಿದರೆ ಆಶ್ಚರ್ಯವಿಲ್ಲ. ಆದರೆ ಅಡಿಗರ ಸಾಲುಗಳು, ಪದಪುಂಜಗಳನ್ನೇ ಬಳಸಿ, ವಿರುದ್ಧವಾದೊಂದು ಧ್ವನಿಯನ್ನು ಹೊರಡಿಸುವ "ಅಣಕವಾಡು" ಇದೆಂದು ನಿರ್ಲಕ್ಷಿಸಲಾಗುವುದಿಲ್ಲ. ಭೂಮಿ–ಪ್ರಕೃತಿ–ಹೆಣ್ಣು ಈ ಸಮೀಕರಣ ಪ್ರಧಾನ ಪರಂಪರೆಯಲ್ಲಿ ಸಾರ್ವತ್ರಿಕವಾದ ಬಲಿಷ್ಠ ಪ್ರತೀಕವಾಗಿದೆ. ಕಾಯುವ | ಕೊಲ್ಲುವ, ಸಂಗೋಪನ | ಧ್ವಂಸನ ಶಕ್ತಿಯುಳ್ಳ ಈ ಮಹಾ ಮಾತೃ ಪ್ರತೀಕ. ಮಾತೆಯಿಂದ ಬೇರೆಯಾಗುವ ಮೂಲ ಕವೇ ತನ್ನ ಪುರುಷತ್ವವನ್ನು ಗುರುತಿಸಿಕೊಳ್ಳಬೇಕಾದ ಪುರುಷನ ವಿಧಿಯ ಒಂದು ಅಂಗವಾಗಿ ಹುಟ್ಟಿದೆ. ಶಿಶುವಾದವನು ಪ್ರಬುದ್ಧನಾಗುವ ಹೊತ್ತಲ್ಲಿ ಅನುಭವಿಸುವ ಎಲ್ಲ ಆತಂಕ, ನೋವು, ಭೀತಿ, ಬೆರಗು, ಗರ್ಭಸ್ಥ ನಿರ್ವಾಣಕ್ಕೆ ಹಿಂದಿರುಗುವವನ ಕೊನೆಯ ಗಮ್ಯಸ್ಥಾನವಾಗಿ ಈ ಪ್ರತೀಕ ಪುರುಷನ ಚಿಂತನೆ ದರ್ಶನಗಳಲ್ಲಿ ಬಹು ಪ್ರಭಾವ ಬೀರಿದೆ. ಇಂಥ ಒಂದು ಜಾಗತಿಕ ಪ್ರತೀಕದ ಹಿಂದಿರುವ ಜೀವನ ದರ್ಶನಕ್ಕೂ, ವಾಸ್ತವದ ಹೆಣ್ಣಿನ ಸ್ಥಿತಿಗೂ ಇರುವ ಅಂತರವನ್ನು ಬಗೆಯುವ ಯತ್ನ ಈ ಕವನದಲ್ಲಿದೆ. ಆ ಸಮಗ್ರ ಪ್ರತೀಕವನ್ನೇ ತನ್ನ ಮೇಲೆ ಆರೋಪಿಸಿಕೊಂಡ ಸ್ಥಿತಿಯಲ್ಲಿ ಕವನದ ನಾಯಕಿ ಭೋಗವಸ್ತುವಾಗಿ ಜಡವಾಗಿಸಲ್ಪಟ್ಟ, ಶೋಷಿಸಲ್ಪಟ್ಟ ಸ್ಥಿತಿಯತ್ತ ಗಮನ ಸೆಳೆಯುತ್ತಾಳೆ.

"ನನ್ನ ತೊಡೆ ತುಂಬ ನೂರಾರು | ನೇಗಿಲ ಗಾಯ | ನಾನು ನನ್ನಮ್ಮ ಅವಳಮ್ಮ ಅಮ್ಮಂದಿರು | ಎಲ್ಲರನು ಮೀರಿಸಿದ ದೊಡ್ಡಮ್ಮ ಕೂಡಾ | ಸಹಿಸಿ ಒಣಗಿದ ಗಾಯ | ಗಂಡನೋ ಮಗನೋ ತಿಳಿಯದ | ಹೊಂದಾ ನೇಗಿಲ ಸಾಲು"

ಈ ನಿಷ್ಕ್ರಿಯವಾದ ಶೋಷಿತ ಸ್ಥಿತಿಯಲ್ಲೇ ಈಕೆ ತನ್ನ ಶಕ್ತಿಯನ್ನೂ ಗುರುತಿಸಿಕೊಳ್ಳುವ ವ್ಯಂಗ್ಯವಿದೆ:

"ಎಲ್ಲಿ ಹೋಗುತ್ತೀ ನನಗೆ ಗೊತ್ತಿಲ್ಲವೆ? | ನನ್ನೆದೆಗೆ ಬೇರಿಳಿದ ಕಾಲು ನಿನ್ನದು"

ಆಳುವ | ಆಳಿಸಿಕೊಳ್ಳುವ ಈ ದ್ವಂದ್ವದಾಚೆಗೆ ತನ್ನನ್ನು ಜಡದ ನೆಲೆಯಿಂದ ಬಿಡಿಸಿ, ಮಾನವೀಯ ನೆಲೆಯಲ್ಲಿ ತೋರಿಸುವ ಆಶಯವಿದೆ:

"ನನ್ನನ್ನೂ ಕರೆಯುತ್ತ ಕಾಣಿರೋ | ಆ ನೀಲ ಆಗಸದ ನೂರಾರು ಬಣ್ಣಗಳು | ಹಾರೋ ಹಕ್ಕಿಗಳು"

ಈ ಮಾನವೀಯ ನೆಲೆಯಲ್ಲಿ ಪುರುಷನ ಸಂಗಾತಿಯಾಗಿ ತನ್ನನ್ನೂ ಒಳಗೊಂಡಂಥ ಬದುಕಿನ ರೂಪಣಕ್ಕಾಗಿ ಕರೆಯಿದೆ, ಪ್ರೀತಿಯ ಒತ್ತಾಯವಿದೆ:

"ಹೇಳು ಗೆಳೆಯ | ನಿನಗನಿಸುವುದಿಲ್ಲವೆ | ನಿನ್ನ ಕನಸಿಗೆ ನಾನೂ ಬಣ್ಣ ತರಬಹುದೆಂದು | ನನ್ನ ಕನಸಿನ ಹಾಡು | ಕೇಳಿ | ನೀ ಹಗುರಾಗಬಹುದೆಂದು | ಭುಜಕ್ಕೆ ಭುಜ ಹಚ್ಚಿ ಕಾಡದಾರಿಗಳನ್ನೆಲ್ಲ ನಾಡಬೀದಿಗಳ ಮಾಡಬಹುದೆಂದು"

ಒಟ್ಟಾರೆ ಹೇಳುವುದಾದರೆ ವಾಸ್ತವದ ವರ್ತಮಾನದ ನೋವು, ಬದಲಾವಣೆಯ ನಿರಂತರ ನಿರೀಕ್ಷೆಯ ಜೊತೆ ಭವಿಷ್ಯದ ಹೊಸ ಸಂಸ್ಕೃತಿಯ ಕಾಣ್ಕೆಯು ಎಳೆಗಳಿವು:

"ನೆನೆಯೋ ನನ್ನೊಡನೆ | ನದಿಯ ಜಳ ಜಳ | ಬಿಸಿಲ ಕಾವು | ಅನ್ನವಿಲ್ಲದ ನೋವು | ಗರ್ಭಪಾತದ ರಕ್ತ | ಒಂದು ಕ್ಷಣ ಈ | ನೆಲದ ಕಣ್ಣೀರನಳಿಸಲು | ಕೈಯನಾದರೂ ಎತ್ತೋಣ" (ಈ ನೆಲದ ಹಾಡು)

"ಎಲ್ಲಿ ಹೋಯಿತೋ ಆ ದಟ್ಟ ಕಾಡು | ಶತಮಾನಗಳ ನೆರಳಿನಾಚೆ | ಎಲ್ಲೋ ಇತ್ತೆಂದು ಹೇಳಲಾದ ಹಸಿರು ಸವತೆ" ಎಂಬ ಕೊರಗಿನ ಜೊತೆಗೆ ಬರುತ್ತವೆ ಆ ಹಸಿರು ನೆರಳಿಗೆ ರೆಕ್ಕೆಯುಗಲಿಸಿ ಹಾರಿ "ಮನೆ ಮಾಡಿ ಮರದೊಳಗಿನ | ಪೊಟರೆ ಗೂಡಿಗೆ | ಮುಚ್ಚಿಟ್ಟು ಕಾವು ಕೊಟ್ಟು | ಹೊಸ ಬದುಕ | ಮೊಟ್ಟೆಗಳ ಬಿರಿಸಬೇಕಿದೆ" ಎಂಬ ಕನಸು (ಒಂದು ಕನಸು)

ಭಾರತೀಯ ಹೆಣ್ಣಿನ ಕಲ್ಪನೆಯಲ್ಲಿ ಇದುವರೆಗೂ ಈ "ಹೊಸ ಬದುಕಿನ" ಕನಸಲ್ಲಿ "ಮನೆ ಮಾಡುವುದು", "ಗೂಡಿಗೆ ಮುಚ್ಚಿಟ್ಟು ಕಾವು ಕೊಡುವುದು", ಮೊಟ್ಟೆ ಬಿರಿಸು" ವುದು ಬದಲಾಗಿಲ್ಲ, ರೀತಿಯಷ್ಟೇ ಬದಲಾಗಿರಬಹುದು — ಎಂಬ ಸ್ಥಿತಿಯಲ್ಲಿ ಉಷಾ ಅವರ ಈ ಸಂಕಲನ ನಿಜಕ್ಕೂ ಸಂಕ್ರಮಣ ಸ್ಥಿತಿಯ ಸಮಾಜದ ಕಾಳಜಿಪೂರ್ವಕ ದಾಖಲೆಯಾಗಿ ನನಗೆ ತೋರುತ್ತದೆ.

ಬಿ. ಎಸ್. ಸುಮಿತ್ರಾ ಬಾಯಿ

○ ○ ○ ○

---

## ವೃದ್ಧಾಪ್ಯದಲ್ಲಿ ಹೆಣ್ಣುಮಕ್ಕಳ ಆಸರೆ

ಭಾರತೀಯ ಸಮಾಜದಲ್ಲಿ ಈಗಲೂ ವೃದ್ಧಾಪ್ಯದಲ್ಲಿ ರಕ್ಷಣೆ ಒದಗಿಸುವವರು ಗಂಡು ಮಕ್ಕಳು ಎಂಬ ಭಾವನೆ ಇದೆ. ಹಾಗಾಗಿ ಅವರ ಪಾಲನೆ, ಪೋಷಣೆ, ದೈಹಿಕ ಸೌಖ್ಯಗಳ ಬಗ್ಗೆ ವಿಶೇಷ ಗಮನ ಹರಿಸಲಾಗುತ್ತದೆ. ಕೆಲವು ಪ್ರದೇಶಗಳಲ್ಲಿ ಉದಾ: ಮಾತೃ ಪ್ರಧಾನ ವ್ಯವಸ್ಥೆ ಇರುವ ಕೇರಳದಲ್ಲಿ ಮತ್ತು ವೃದ್ಧಾಪ್ಯದಲ್ಲಿ ಹೆತ್ತವರು ಮದುವೆಯಾದ ಹೆಣ್ಣುಮಕ್ಕಳ ಜತೆ ವಾಸಿಸುವ ವ್ಯವಸ್ಥೆಯಿರುವ ಪಶ್ಚಿಮ ಭಾರತದಲ್ಲಿ ಹೆಣ್ಣುಮಕ್ಕಳನ್ನು ಬಹಿಷ್ಕೃತರಂತೆ ಕಾಣಲಾಗುತ್ತಿಲ್ಲ ಎಂಬ ಅಂಶವನ್ನು ಜನಗಣತಿ ಮಾಹಿತಿ ಹೊರಗೆಡಹಿದೆ. ಈ ಪ್ರದೇಶಗಳಲ್ಲಿ ಪುರುಷ–ಮಹಿಳೆಯ ಅನುಪಾತ ಪ್ರತಿಕೂಲ ಪ್ರಮಾಣದಲ್ಲಿ ಇಲ್ಲ, ಮಹಿಳೆಯರ ಸಾಕ್ಷರತೆ ಪ್ರಮಾಣ ಕೂಡಾ ರಾಷ್ಟ್ರೀಯ ಸರಾಸರಿ ಸಾಕ್ಷರತೆ ಪ್ರಮಾಣಕ್ಕಿಂತ ಹೆಚ್ಚು ಇದೆ.

ಕಮಲಾ ಮಂಕೇಕರ್.
( ಕೃಪೆ: ಪ್ರಜಾವಾಣಿ )

---

# ನಾ ಕಂಡ ಜರ್ಮನ್ ಮಹಿಳೆ

ಡಾ|| ಎಚ್. ಎಸ್. ಉಷಾರಾಣಿ.

ಜರ್ಮನಿ ಎಂದಾಕ್ಷಣ ಸರ್ವಾಧಿಕಾರಿ ಹಿಟ್ಲರ್ ಹಾಗೂ ಆತನ ಕಾನ್ಸಂಟ್ರೇಷನ್ ಕ್ಯಾಂಪ್ ಜ್ಞಾಪಕಕ್ಕೆ ಬರುತ್ತದೆ. ಅಷ್ಟೇ ಅಲ್ಲ, ಜ್ಯೂಗಳ ಸ್ಥಿತಿಗತಿ ಹೇಗಿದೆ? ಎಂಬ ಸಂದೇಹ ನಮ್ಮನ್ನು ಕಾಡುತ್ತದೆ. ಜರ್ಮನರನ್ನು ಭೇಟಿ ಮಾಡಿದರೆ ಇದರ ಬಗ್ಗೆ ಕೇಳ ಬೇಕೆಂಬ ಕುತೂಹಲ ಉಂಟಾಗುವುದು ಸಹಜ. ಇತ್ತೀಚೆಗೆ ಕಾಶಿರಗೋಡಿಗೆ ಹೋಗಿದ್ದಾಗ ನನಗೆ ಜರ್ಮನ್ ಮಹಿಳೆ ಮಾರ್ಗರೆಟ್‌ರ ಪರಿಚಯವಾಯಿತು. ಆಕೆ ಗಗನಸಖಿ, ಸ್ನೇಹಮಯಿಯೂ ಹೌದು. ನನ್ನ ಪ್ರಶ್ನೆಗಳಿಗೆ ಸಾವಧಾನವಾಗಿ ಉತ್ತರಿಸಿದರು. ಅದೃಷ್ಟವಶಾತ್ ಆಕೆ ಯಹೂದಿಯಾಗಿದ್ದುದರಿಂದ ಯಹೂದಿಗಳ ಬಗ್ಗೆ ತಿಳಿಯಲು ಸಾಧ್ಯವಾಯಿತು.

ಇಂದು ಜರ್ಮನಿಯಲ್ಲಿ ಧಾರ್ಮಿಕ ನಂಬಿಕೆಗಳು ವಿಶೇಷವಾಗಿ ಉಳಿದಿಲ್ಲ. ವ್ಯಕ್ತಿಯನ್ನು ಕ್ರಿಶ್ಚಿಯನ್ ಅಥವಾ ಯಹೂದಿ ಎಂದು ಸಮಾಜ ಗುರುತಿಸದೆ ಕೇವಲ ಜರ್ಮನ್ ಎಂದು ಗುರುತಿಸುತ್ತದೆ. ಅದೀಗ ಜಾತ್ಯಾತೀತ ರಾಷ್ಟ್ರ. ಸಮಾನ ಅವಕಾಶಗಳು, ಸೌಲಭ್ಯಗಳು ಎಲ್ಲರಿಗೂ ಲಭ್ಯವಿದೆ.

ಜರ್ಮನರ ಜನಪದ ಗೀತೆಗಳು ಮತ್ತು ನೃತ್ಯಗಳನ್ನು ಹಿಟ್ಲರ್ ಸ್ವಾರ್ಥಕ್ಕಾಗಿ ಬಳಸಿಕೊಂಡಿದ್ದ. ಹಾಗಾಗಿ ಅವು ಯುವ ಪೀಳಿಗೆಯ ದ್ವೇಷಕ್ಕೆ ಗುರಿಯಾಗಿವೆ. ಅವು ಹಿಟ್ಲರನನ್ನು ಸ್ತುತಿಸಲು ದುರುಪಯೋಗವಾಗಿರುವುದರಿಂದ, ಜರ್ಮನರ ಆಚಾರ, ಸಂಪ್ರದಾಯ ತನ್ನ ಮೌಲ್ಯವನ್ನು ಕಳೆದುಕೊಂಡಿದೆ.

ಹಿಟ್ಲರನ ದಮನಕಾರಿ ನೀತಿಗೆ ಬಲಿಯಾದ ಯಹೂದಿಗಳೆಷ್ಟೋ ಮಂದಿ ತಲೆತಪ್ಪಿಸಿಕೊಂಡಿದ್ದರು. ನಿರಾಶ್ರಿತರಾಗಿ ಕೆಲವು ಕಾಲ ಫ್ರಾನ್ಸ್ ಇಟಲಿಗಳಲ್ಲಿ ನೆಲೆಸಿದ್ದು ನಂತರ ಇಸ್ರೇಲ್‌ಗೆ ತೆರಳಿದ್ದರು. ಕುಟುಂಬಕ್ಕೆ ಕುಟುಂಬವೇ ನಾಶವಾಗಿದೆ (ಕಾನ್ಸಂಟ್ರೇಷನ್ ಕ್ಯಾಂಪ್‌ಗೆ ಬಲಿಯಾಗಿ). ಯುದ್ಧ ಮುಗಿದ ಐದಾರು ವರ್ಷಗಳ ಬಳಿಕ ಪಲಾಯನ ಮಾಡಿದ್ದ ಯಹೂದಿಗಳು ಜರ್ಮನಿಗೆ ಹಿಂತಿರುಗಿದರು. ಅವರಲ್ಲಿ ಮಾರ್ಗರೆಟ್‌ರ ತಂದೆ ತಾಯಿಯೂ ಸೇರಿದ್ದಾರೆ. ಆಗ ಅವರಿಗಿನ್ನೂ ವಿವಾಹವಾಗಲಿ, ಭೇಟಿಯಾಗಲಿ ಆಗಿರಲಿಲ್ಲವಂತೆ. ತಾಯಿ ಕೇವಲ ಹದಿನೆಂಟು ವರ್ಷದ ಯುವತಿಯಾಗಿದ್ದರಂತೆ. ಅವರು ಪಟ್ಟಪಾಡುಗಳು ಅಷ್ಟಿಷ್ಟಲ್ಲ.

ಮಾರ್ಗರೆಟ್ ಜೂಡಾಯಿಸಂ ಅನ್ನು ಅನುಸರಿಸುತ್ತಿಲ್ಲ. ಆದರೆ ಅವರು ತಮ್ಮ ಹದಿನೆಂಟು ಹತ್ತೊಂಬತ್ತನೆಯ ವಯಸ್ಸಿನಲ್ಲಿ ಪ್ರಥಮ ಬಾರಿಗೆ ಇಸ್ರೇಲ್‌ಗೆ ಭೇಟಿ ನೀಡಿದ್ದರು. ಅಲ್ಲಿ ಒಂದು ವರ್ಷ ಕಾಲ ಯಹೂದಿ ಸಮಾಜದ ಬಗ್ಗೆ ಹೆಚ್ಚಿನ ತಿಳುವಳಿಕೆ ಪಡೆಯಲು ವ್ಯವಸ್ಥೆ ಮಾಡಲಾಗಿತ್ತಂತೆ. "ಆಗ ಹಿಬ್ರೂ ಭಾಷೆ ಕಲಿತಿದ್ದೆ. ಈಗ ಎಲ್ಲವೂ ಮರೆತು ಹೋಗಿದೆ" ಎನ್ನುತ್ತಾರೆ ಅವರು.

ತಂದೆ ತಾಯಿಗೆ ಮಕ್ಕಳನ್ನು ಹದಿನೆಂಟು ವರ್ಷದವರೆಗೆ ನೋಡಿಕೊಳ್ಳುವ ಜವಾಬ್ದಾರಿ ಇದೆ. ನಂತರ ಮಕ್ಕಳು ಇಷ್ಟಪಟ್ಟಲ್ಲಿ ಸ್ವತಂತ್ರರಾಗಬಹುದು. ಆದರೆ ಜೀವನ ಪರ್ಯಂತ ಮಕ್ಕಳಿಗೂ ತಂದೆ ತಾಯಿಗಳಿಗೂ ನ್ಯಾಯಬದ್ಧ ಸಂಬಂಧಗಳು ಹಾಗೂ ಕರ್ತವ್ಯಗಳಿರುತ್ತವೆ ಎಂಬುದಾಗಿ ಮಕ್ಕಳ ಮತ್ತು ಪೋಷಕರ ಸಂಬಂಧ ಕುರಿತು ಮಾಹಿತಿ ನೀಡಿದರು.

ಶಿಕ್ಷಣಕ್ಕೆ ಸಂಬಂಧಪಟ್ಟಂತೆ ಕೇಳಿದಾಗ — ೩೦ ವರ್ಷದ ಹಿಂದೆ ಬಾಲಿಕೆಯರಿಗಾಗಿ ಪ್ರತ್ಯೇಕ ಶಾಲೆಗಳಿದ್ದವು. ವಿಜ್ಞಾನ ಕಲಿಯಲಿಕ್ಕೆ ಸಹ ಶಿಕ್ಷಣ ಶಾಲೆಗೆ ಹೋಗಬೇಕಾಗಿತ್ತು. ಆಗ ನಾವು ಐದು ಮಂದಿ ಮಾತ್ರ ಹುಡುಗಿಯರಿದ್ದೆವು. ಹುಡುಗರೊಡನೆ ಅಷ್ಟು ಸುಲಭವಾಗಿ ಬೆರೆಯುತ್ತಿರಲಿಲ್ಲ. ಈಗ

ಹಾಗಲ್ಲ, ಸಾಕಷ್ಟು ಬದಲಾಗಿದ್ದಾರೆ ನಮ್ಮ ಯುವ ಪೀಳಿಗೆಯವರು. ಸಹ ಶಿಕ್ಷಣ ಶಾಲೆಗಳು ಅಧಿಕ ಸಂಖ್ಯೆಯಲ್ಲಿವೆ. ಹದಿಮೂರು ವರ್ಷದ ಶಾಲಾ ವಿದ್ಯಾಭ್ಯಾಸ ಮುಗಿಸಿದ ಬಳಿಕ ಉನ್ನತ ವ್ಯಾಸಂಗಕ್ಕೆಂದು ವಿಶ್ವವಿದ್ಯಾನಿಲಯಕ್ಕೆ ಸೇರಲಿಲ್ಲ. ನಮ್ಮಲ್ಲಿ ಎಸ್.ಎಸ್.ಎಲ್.ಸಿ. ಎಂದು ಹೇಳುವ ಹಾಗೆ ಅಲ್ಲಿನ ಅಬಿತುರ್ ಮುಗಿಸಿರುವುದಾಗಿ ಆಕೆ ಹೇಳುತ್ತಾರೆ.

೯ ವರ್ಷಗಳಿಂದ ಗಗನಸಖಿಯಾಗಿ ಪ್ಯಾನ್ ಆಮ್‌ಗೆ ಸೇವೆ ಸಲ್ಲಿಸುತ್ತಿರುವ ಮಾರ್ಗರೆಟ್ ಅವರಿಗೆ ಇತರ ಸೇವಾ ಅನುಭವಗಳು ಸಾಕಷ್ಟಿವೆ. ಉದಾಹರಣೆಗೆ ಆಸ್ಪತ್ರೆಯಲ್ಲಿ ಆಪರೇಷನ್ ಥಿಯೇಟರ್ ಶುಚಿಗೊಳಿಸುವುದು, ರೋಗಿಗಳಿಗೆ ಮಸಾಜ್ ಮಾಡುವುದು, ನೈಟ್ ಡ್ಯೂಟಿ ನರ್ಸ್‌ಗೆ ಸಹಾಯಕಿಯಾಗಿರುವುದು, ಕಚೇರಿಗಳಲ್ಲಿ ಲೆಕ್ಕ ಬರೆಯುವುದು, ಕಾರ್ಖಾನೆಯಲ್ಲಿ ಪ್ಯಾಕಿಂಗ್ ಮಾಡುವುದು, ಹೋಟೆಲ್‌ನಲ್ಲಿ ಕೊಠಡಿಗಳನ್ನು ಶುಚಿಗೊಳಿಸುವುದು ಇತ್ಯಾದಿ. ಈ ಕೆಲಸಗಳು ಒಂದು ತಿಂಗಳಿನಿಂದ ಆರು ತಿಂಗಳ ಅವಧಿಯದ್ದು. ಇವುಗಳಿಗೆ ಸಿಗುತ್ತಿದ್ದುದು ಅರ್ಧ ವೇತನ; ತಿಂಗಳಿಗೆ ಎರಡು ಮೂರು ಸಾವಿರ ಮಾರ್ಕ್‌ಗಳು ಅಷ್ಟೆ. ಇಲ್ಲಿ ಪಾಶ್ಚಾತ್ಯರ ವೃತ್ತಿ ಗೌರವ ಗಮನಾರ್ಹ.

ಉದ್ಯೋಗಸ್ಥ ಮಹಿಳೆಯರಿಗಿರುವ ಸೌಲಭ್ಯಗಳ ಬಗ್ಗೆ ಪ್ರಶ್ನಿಸಿದಾಗ — "ಗಗನ ಸಖಿಯಾದ ನನಗೆ ನನಗಿರುವ ಸೌಲಭ್ಯಗಳು ಗೊತ್ತಿದೆ. ಉಳಿದವರ ಬಗ್ಗೆ ಗೊತ್ತಿದ್ದಷ್ಟನ್ನು ಹೇಳುತ್ತೇನೆ" ಎಂದರು. ಅದರಂತೆ ಗಗನ ಸಖಿಯಾಗಲು ಅರ್ಹತೆ- ೧೦ ವರ್ಷದ ಶಾಲಾ ವಿದ್ಯಾಭ್ಯಾಸ, ಇಂಗ್ಲಿಷಿನಲ್ಲಿ ನಿರರ್ಗಳವಾಗಿ ಮಾತನಾಡುವ ಕಲೆ, ಆಕರ್ಷಕ ವ್ಯಕ್ತಿತ್ವ ಮುಖ್ಯವಾದವು. ಗಗನ ಸಖಿಯರಿಗೆ ವಿವಾಹವಾಗಲು ನಿರ್ಬಂಧಗಳಿಲ್ಲ. ಗರ್ಭಿಣಿಯಾದಲ್ಲಿ ರಜಾ ಸಾಕಷ್ಟು ತೆಗೆದುಕೊಳ್ಳಬಹುದು. ಅಂದರೆ ಸುಮಾರು ೪ ವರ್ಷಗಳ ಕಾಲ ವೇತನ ರಹಿತ ರಜೆ ಸೌಲಭ್ಯ ಇದೆ. ಒಂದು ವೇಳೆ ಗಂಡನಿಗೆ ಕೆಲಸವಿಲ್ಲದಿದ್ದಲ್ಲಿ ಒಂದು ವರ್ಷ ವೇತನ ಸಹಿತ ರಜೆ ಪಡೆಯಬಹುದು. ಅದೂ ಆಕೆಯ ಆಯ್ಕೆಗೆ ಬಿಟ್ಟದ್ದು. ರಜಾ ಮುಗಿದ ಬಳಿಕ ಸೇವೆಯ ಮುಂದುವರಿಕೆಗೆ ಯಾವ ತೊಂದರೆ ಇಲ್ಲ.

ವರ್ಷಕ್ಕೆ ಒಂದು ತಿಂಗಳು ವೇತನ ಸಹಿತ ರಜಾ ತೆಗೆದುಕೊಳ್ಳಲೇಬೇಕು; ಸಿಕ್ ಲೀವ್ ಇದೆ, ಹೆಚ್ಚಾದರೆ ಅಥವಾ ವಿಸ್ತರಿಸಿದರೆ ವೇತನ ರಹಿತ ರಜೆ ಎಂದು ಪರಿಗಣಿಸಲಾಗುತ್ತದೆ. ದಬ್ಬಾಳಿಕೆಗಳಿಲ್ಲ. ಪ್ರಯಾಣಿಕರಿಂದ ಟೀಕೆಗಳಿರುತ್ತವೆ. ವಿಮಾನ ತಡವಾಯಿತು, ಆಹಾರ ಚೆನ್ನಾಗಿಲ್ಲ ಇತ್ಯಾದಿ. ಮಾರ್ಗರೆಟ್‌ರ ಸೇವೆ ಆಂತರಿಕ ಹಾರಾಟಕ್ಕೆ ಸೀಮಿತ, ಆದರೆ ಉದ್ಯೋಗಿಗಳಿಗೆ ರಿಯಾಯಿತಿ ದರದಲ್ಲಿ ವಿಮಾನದ ಟಿಕೆಟ್‌ಗಳು ಲಭ್ಯವಿರುವುದರಿಂದ ಪ್ರವಾಸ ಹೋಗಲು ತಮಗೆ ಹೆಚ್ಚಿನ ಕಷ್ಟವಿಲ್ಲವೆಂದರು. ಜರ್ಮನ್ ಗಗನ ಸಖಿಗಳ ನಿವೃತ್ತಿ ವಯಸ್ಸು ೫೫. ಉಳಿದ ಇಲಾಖೆಗಳಲ್ಲಿ ಸ್ನೇಹಿತರಿದ್ದರೂ ವಿವರವಾಗಿ ತಿಳಿದುಕೊಂಡಿಲ್ಲ. ಆದರೆ ಮಹಿಳೆಯರು ವಿವಾಹಿತರಾಗಿದ್ದು ಸಣ್ಣ ಮಕ್ಕಳಿದ್ದಲ್ಲಿ ಅವರನ್ನು ಖಾಸಗಿ ಬೇಬಿ ಸಿಟ್ಟಿಂಗ್ (ಮನೆಗಳಲ್ಲಿ) ಅಥವಾ ಸರಕಾರದಿಂದ ನೇಮಕಗೊಂಡಿರುವ ಬೇಬಿ ಸಿಟ್ಟರ್ಸ್ ಬಳಿ ಬಿಡಬೇಕಷ್ಟೆ. ಕಚೇರಿಗಳಲ್ಲಿ ಮಕ್ಕಳನ್ನು ನೋಡಿಕೊಳ್ಳಲು ಯಾವ ಸೌಕರ್ಯಗಳನ್ನು ಕಲ್ಪಿಸಿಲ್ಲ. ರಜೆಗಳಿಗೆ ಕೊರತೆ ಇಲ್ಲ. ಮೆಟರ್ನಿಟಿ ರಜಾ ಇದೆ. ರಜೆಯನ್ನು ವಿಸ್ತರಿಸಿದರೆ ವೇತನ ರಹಿತ ರಜಾ ಪಡೆಯಬೇಕು ....... ಇತ್ಯಾದಿ ತಮಗೆ ಗೊತ್ತಿರುವುದನ್ನು ಖಚಿತವಾಗಿ ತಿಳಿಸಿದರು.

ಇತ್ತೀಚೆಗೆ ಜರ್ಮನಿಯಲ್ಲಿ ಸ್ತ್ರೀ ಪುರುಷರ ನಡುವಿನ ಸಂಬಂಧಗಳಲ್ಲಿ ಬದಲಾವಣೆ ಕಂಡುಬರುತ್ತಿದೆ. ಅಂದರೆ ಮೂವತ್ತು ವರ್ಷದ ಹಿಂದೆ ವಿವಾಹಕ್ಕೆ ಮೊದಲು ಲೈಂಗಿಕ ಸಂಬಂಧ ನಿಷೇಧಿಸಲ್ಪಟ್ಟಿತ್ತು. ಆದರೆ ಈಗ ಸರ್ವ ಸಾಮಾನ್ಯವಾಗಿದೆ. ಅವಿವಾಹಿತರು ಮಕ್ಕಳನ್ನು ಹಡೆದಲ್ಲಿ ಆ ಮಗುವಿನ ಪೋಷಣೆಗೆ ಸರ್ಕಾರ ಧನ ಸಹಾಯ ನೀಡುತ್ತದೆ. ಅಂಥವನ್ನು ಸಮಾಜದಲ್ಲಿ ಹೀನಾಯವಾಗಿ ಕಾಣುವುದಿಲ್ಲ. ಉದಾಹರಣೆಗೆ ೨೩ ವರ್ಷದ ನರ್ಸ್ ಒಬ್ಬಾಕೆ ಗರ್ಭಿಣಿಯಾದಾಗ ಸ್ನೇಹಿತನ ಸಹವಾಸ ತೊರೆದಳು. ಆಕೆಗೆ ಎರಡೂವರೆ ವರ್ಷದ ಹೆಣ್ಣು ಮಗುವಿದೆ. ಈಗ ಆಕೆ ವಿವಾಹವಾಗುವುದರಲ್ಲಿದ್ದಾಳಂತೆ. ಹುಡುಗ ಅಮೇರಿಕಾದವನು. ಆಕೆಯ ನಂಬಿಕೆಗೆ ಅರ್ಹನಾಗಿದ್ದಾನಂತೆ. ಇದನ್ನು ಯಾವ ಅಳುಕಿಲ್ಲದೆ ಸಲೀಸಾಗಿ ಹೇಳಿದರು.

ಪಾಶ್ಚಾತ್ಯರಿಗೆ ಪ್ರವಾಸ ಕೈಗೊಳ್ಳುವ ಅಭಿರುಚಿ ಹೆಚ್ಚು. ಎಪ್ಪತ್ತೇಳು ವರ್ಷ ವಯಸ್ಸಿನ ಮಾರ್ಗರೆಟ್ ಈಗಾಗಲೆ ೩೨ ರಾಷ್ಟ್ರಗಳನ್ನು ಸಂಚರಿಸಿದ್ದಾರೆ. ಆಕೆ ಭೇಟಿ ನೀಡಿದ ರಾಷ್ಟ್ರಗಳು ಇಂಗ್ಲೆಂಡ್, ಹಾಲೆಂಡ್, ಫ್ರಾನ್ಸ್, ಸ್ಪೇನ್, ಬೆಲ್ಜಿಯಂ, ಕೋಸ್ಟರಿಕಾ, ಬ್ರೆಜಿಲ್, ಅರ್ಜೆಂಟೈನಾ, ಚಿಲಿ, ಜಮೈಕಾ, ಗ್ವಾಟೆಮಾಲಾ, ಬಾರ್ಬೆಡೊಸಾ, ಟರ್ಕಿ, ಈಜಿಪ್ಟ್, ಕೀನ್ಯಾ, ಇರಾನ್, ಇಸ್ರೇಲ್, ಅಫ್ಘಾನಿಸ್ತಾನ, ಪಾಕಿಸ್ತಾನ, ಭಾರತ, ನೇಪಾಳ, ಸಿಲೋನ್, ಮೊರಾಕ್ಕೊ, ಹಾಂಕಾಂಗ್ ಮತ್ತು ಜಪಾನ್. ವರ್ಷದಲ್ಲಿ ಆರು ತಿಂಗಳು ದುಡಿದರೆ ಮತ್ತೆ ೬ ತಿಂಗಳು ಪ್ರವಾಸದಲ್ಲಿ ತೊಡಗಬಹುದು. ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಜೀವನದ ಮಟ್ಟ ಕಡಿಮೆ ಇರುವುದರಿಂದ ಏಷ್ಯನ್ ರಾಷ್ಟ್ರಗಳಿಗೆ ಭೇಟಿ ಕೊಡಲು ಸಾಧ್ಯ. ಭಾರತಕ್ಕೆ ಸತತವಾಗಿ ಹದಿನಾರು ವರ್ಷಗಳಿಂದ ಭೇಟಿ ನೀಡುತ್ತಿರುವ ಕಾರಣ – ಆಧ್ಯಾತ್ಮದ ಆಕರ್ಷಣೆ, ಗ್ರಾಮೀಣ ಪ್ರದೇಶಗಳ ಸುಂದರ ನೋಟ ಹಾಗೂ ಜನರ ಸ್ನೇಹಭಾವ ಮತ್ತು ಅತಿಥಿ ಸತ್ಕಾರ ತನಗೆ ಮೆಚ್ಚುಗೆಯಾದದ್ದು. ತಂದೆಯೊಡನೆ ಮೊದಲು ಭಾರತಕ್ಕೆ ಭೇಟಿ ನೀಡಿದ ಆಕೆ, ನಂತರ ಒಬ್ಬರೇ ಬರಲಾರಂಭಿಸಿದೆ ಎಂಬುದಾಗಿ ಭಾರತದ ಭೇಟಿಯ ಹಿನ್ನೆಲೆಯ ಕುರಿತು ವಿವರಿಸಿದರು. ಭಾರತಕ್ಕೆ ಬಂದರೆ ಆಶ್ರಮ ಬಿಟ್ಟರೆ ಇನ್ನೆಲ್ಲಿಗೂ ಹೋಗಲಿಕ್ಕೆ ಇಚ್ಛೆಯಿಲ್ಲವೆಂದರು (ಅಂದರೆ ೪–೫ ತಿಂಗಳು ಆಶ್ರಮದಲ್ಲಿ ನೆಲೆಸುವುದು ನೆಮ್ಮದಿ ಕೊಡುತ್ತದೆ ಎಂಬ ಅಭಿಪ್ರಾಯ)

ಏಕೀಕೃತ ಜರ್ಮನಿಯ ಬಗ್ಗೆ ವಿಚಾರಿಸಿದಾಗ ಪೂರ್ವ ಜರ್ಮನಿ ನಾಲ್ಕೂವರೆ ದಶಕಗಳ ಕಾಲ ಕಮ್ಯೂನಿಸ್ಟರ ಹಿಡಿತದಲ್ಲಿದ್ದುದರಿಂದ ಆ ತತ್ವಗಳ ಪ್ರಭಾವಕ್ಕೊಳಪಟ್ಟ ಜನ ಬಹು ಸೋಮಾರಿಗಳು. ಒಬ್ಬ ಕೆಲಸ ಮಾಡುತ್ತಿದ್ದರೆ ಮತ್ತೊಬ್ಬ ವೀಕ್ಷಿಸುತ್ತಿರುತ್ತಾನೆ. ಮಗದೊಬ್ಬ ಆಯಾಸ ಪರಿಹರಿಸಿಕೊಳ್ಳುತ್ತಿರುತ್ತಾನೆ. ಅಂದರೆ ಹೆಚ್ಚು ಕೆಲಸಕ್ಕೆ ಹೆಚ್ಚು ವೇತನವಿಲ್ಲದಿರುವುದರಿಂದ ನಿಗದಿತ ಕೆಲಸ ಬಿಟ್ಟು ಹೆಚ್ಚಿನದನ್ನು ಮಾಡಲು ಅವರು ಸಿದ್ಧರಿಲ್ಲ. ಸೋಮಾರಿ ಹಾಗೂ ನಿರುದ್ಯೋಗಿ ಜನರ ಸ್ಥಿತಿಯನ್ನು ಸುಧಾರಿಸುವುದು ಬಹು ಪ್ರಯಾಸವಾಗಿದೆ. ಬಂಡವಾಳಶಾಹಿ ಮನೋಭಾವಕ್ಕೆ ತದ್ವಿರುದ್ಧವಾಗಿದೆ ಅಲ್ಲಿಯ ಜನರ ಕಾರ್ಯ ವೈಖರಿ ಎಂಬ ವಿಚಾರ ತಿಳಿಸಿದರು.

ಪೂರ್ವ ಬರ್ಲಿನ್‌ನಿಂದ ಪಶ್ಚಿಮಕ್ಕೆ ಬಂದ ಜರ್ಮನರಿಗೆ ಷಾಪಿಂಗ್ ಮಾಡುವ ಕೆಲಸದಲ್ಲಿರುವಷ್ಟು ಆಸಕ್ತಿ ಇನ್ಯಾವುದರಲ್ಲೂ ಇಲ್ಲ: ಗಂಟೆಗಟ್ಟಲೆ ಕ್ಯೂ ನಿಂತು ಷಾಪಿಂಗ್ ಮಾಡುತ್ತಲೇ ಇರುತ್ತಾರೆ, ಪಶ್ಚಿಮ ಜರ್ಮನರಿಗೆ ಇದೊಂದು ತಲೆನೋವಾಗಿ ಪರಿಣಮಿಸಿದೆ. ಅಗತ್ಯ ವಸ್ತುಗಳನ್ನು ಕ್ರಯಿಸಲು ಗಂಟೆಗಟ್ಟಲೆ ಕಾಯಬೇಕೆಂದರೆ ಎಂತಹವರಿಗಾದರೂ ಈ ಅನುಭವವಾಗುವುದು ಸಹಜವಲ್ಲವೆ? ಎಂದು ಪ್ರಶ್ನಿಸಿದರು. ಟಿ.–ವಿ. ನೋಡುತ್ತಲೇ ಜನ ಕಾಲ ಕಳೆಯುತ್ತಾರೆ. ಮಹಾ ಸೋಮಾರಿಗಳು ಅಂದಾಗ ನನಗೆ ಬಂಗಾಲಿಗಳ ಜ್ಞಾಪಕವಾಯಿತು. ಕಲ್ಕತ್ತಾಗೆ ವರ್ಗವಾಗಿ ಹೋದವರು ಇದೇ ರೀತಿ ಹೇಳುತ್ತಾರೆ. ಅಂದರೆ ಕಮ್ಯೂನಿಸ್ಟರ ಹಾವಳಿ ಇರುವಲ್ಲೆಲ್ಲಾ ಜನ ಹಕ್ಕು ಬಾಧ್ಯತೆಗಳಿಗಾಗಿ ಕಾನೂನು ಉಲ್ಲೇಖಿಸಿ ಗಂಟೆಗಟ್ಟಲೆ ಭಾಷಣ ಬಿಗಿಯುತ್ತಾ ವ್ಯರ್ಥವಾಗಿ ಕಾಲಕಳೆಯುತ್ತಾರೆ, ಕೆಲಸ ಸಾಗೋದಿಲ್ಲ ಹೊರಗಿನಿಂದ ಬಂದವರೇ ಹೇಗೋ ನಿಭಾಯಿಸಿಕೊಂಡು ಹೋಗಬೇಕಷ್ಟೆ ಎಂದು ಹೇಳುವುದನ್ನು ತಾವು ಕೇಳಿಲ್ಲವೆ?

ಇನ್ನು ಬರ್ಲಿನ್ ಗೋಡೆ ಒಡೆಯುವ ಮುನ್ನ ಪಶ್ಚಿಮಕ್ಕೆ ಬರುವ ಸಂಭ್ರಮದಲ್ಲಿ ತಮ್ಮ ಮಕ್ಕಳು ಹಾಗೂ ಪತ್ನಿಯರನ್ನು ಕರೆತರಲು ಎಷ್ಟೋ ಪುರುಷರು ಗಮನಕೊಟ್ಟಿಲ್ಲ., ಇದು ಮಕ್ಕಳಿಗೆ ತಂದೆ ಇಲ್ಲದ ಕೊರತೆಯನ್ನುಂಟು ಮಾಡಿದೆ, ಈ ಸಮಸ್ಯೆ ಬೇಜವಾಬ್ದಾರಿ ವ್ಯಕ್ತಿಗಳಿಂದ ಸೃಷ್ಟಿಸಲ್ಪಟ್ಟಿದ್ದು ಎಂಬುದಾಗಿ ಪ್ರಸ್ತುತ ಕುಟುಂಬಗಳ ಸ್ಥಿತಿಗತಿ ಹಾಗೂ ಸಮಸ್ಯೆಯನ್ನು ಹೇಳಿದರು.

ಕೈಗಾರಿಕೀಕರಣದಿಂದಾಗಿ ಪರಿಸರ ಮಾಲಿನ್ಯ ಸಾಕಷ್ಟಿದೆ. "ಪರಿಸರ ರಕ್ಷಿಸುವ" ಅಲೆ ಎದ್ದಿದೆ, ಇದರತ್ತ ಜನರಲ್ಲಿ ಜಾಗೃತಿ ಕಂಡು ಬರುತ್ತಿದೆ, ಆದರೆ ಕಾರುಗಳ ಓಡಾಟಕ್ಕೆ ಹೊಸ ಕೈದಾರಿಗಳ ಸ್ಥಾಪನೆಗೆ ಯಾವ ಅಡ್ಡಿಯೂ ಇಲ್ಲ ಎಂದು ಪರಿಸರ

ಮಾಲಿನ್ಯದ ಬಗ್ಗೆ ನುಡಿದರು.

ಮಾರ್ಗರೆಟ್ ಅವಿವಾಹಿತೆ. ವೃದ್ಧ ತಂದೆ ತಾಯಿ ಬಗ್ಗೆ ವಿಶೇಷ ಕಾಳಜಿ ಇದೆ. ಭಾರತದಲ್ಲಿದ್ದಾಗ ಒಮ್ಮೆ ತಾಯಿಗೆ, ಮಗದೊಮ್ಮೆ ತಂದೆಗೆ ಸೌಖ್ಯವಿಲ್ಲವೆಂದು ಟೆಲಿಗ್ರಾಮ್ ಬಂದು ತಾನು ಕೂಡಲೇ ಜರ್ಮನಿಗೆ ತೆರಳಬೇಕಾಯಿತು ಎಂದು ಕಳಕಳಿಯಿಂದ ಹೇಳಿದಳು. ಅವರು ನರಳುವುದನ್ನು ತನಗೆ ನೋಡಲಿಕ್ಕಾಗುವುದಿಲ್ಲ. ತಾನು ಗಗನ ಸಖಿ ಹುದ್ದೆಗೆ ರಾಜಿನಾಮೆ ನೀಡಿದರೆ ನರ್ಸ್ ಕೆಲಸಕ್ಕೆ ಸೇರುವ ಇಚ್ಛೆ ಇದೆ ಎಂದೂ, ನರಳುವವರಿಗೆ ಸಾಂತ್ವನ ನೀಡುವ ಕೆಲಸದಲ್ಲಿ ತೃಪ್ತಿ ಸಿಗುತ್ತದೆಂದರು. ಮಕ್ಕಳನ್ನು ಪಡೆಯುವ ಆಸೆ ಇಲ್ಲ. ಹಾಗಾಗಿ ವಿವಾಹವಾಗುವುದಿಲ್ಲವೆಂದು ತಮ್ಮ ನಿರ್ಧಾರ ತಿಳಿಸಿದರು.

ಆಕೆಯನ್ನು ಬೀಳ್ಕೊಡುವಾಗ ನಮ್ಮ ಅಡ್ರೆಸ್ ತೆಗೆದುಕೊಂಡದ್ದಲ್ಲದೆ ತಮ್ಮದನ್ನು ಕೊಟ್ಟರು. ಜೊತೆಗೆ ತಾನು "ಟಿಪಿಕಲ್ ಜರ್ಮನ್ ಅಲ್ಲವೆಂದೂ ಯಹೂದಿಗಳಲ್ಲಿ ಅಲೆಮಾರಿ ಜೀವನ ನಡೆಸುವುದು ರಕ್ತಗತವಾಗಿ ಬಂದಿದೆ. "ಆತ್ಮವಿಲ್ಲದ ಜನ ಜರ್ಮನರು" ವಿಶ್ವವನ್ನೇ ತಲ್ಲಣಿಸಿದ ಯುದ್ಧಗಳಿಗೆ ಕಾರಣಕರ್ತರಾದ ಜರ್ಮನರು "ಯುದ್ಧ" ಎಂಬ ಪದವನ್ನು ಆಲಿಸಲು ಇಷ್ಟಪಡದಿರುವುದೇನೋ ಹೌದು, ಆದರೆ ಅವರಲ್ಲಿನ್ನೂ ಮೇಲರಿಮೆ ಭದ್ರವಾಗಿದೆ" ಎಂಬುದು ಆಕೆಯ ಅಭಿಮತ. ಒಟ್ಟಿನಲ್ಲಿ ನಾ ಕಂಡ ಜರ್ಮನ್ ಮಹಿಳೆಯಲ್ಲಿ ಸರಳತೆ, ಸೌಜನ್ಯ, ಸಂಸ್ಕಾರ ಎದ್ದು ಕಾಣುತ್ತಿತ್ತು.



## ಕತ್ತಲ ಎದೆಯೊಳಗೆ ದೀಪಾವಳಿ

ಎದ್ದು ನಿಂತಳು!  
ನೆರೆದಿದ್ದವರ ನಡುವಿಂದ  
ಕೈಯ್ಯಲ್ಲೊಂದು ಪುಟ್ಟಬುಟ್ಟಿ  
ಹಿಡಿದು ಎಲ್ಲರ ಬಳಿ ಬಂದಳು  
ಕಣ್ಣಿಟ್ಟು ಕೇಳಿದಳು  
ಕೊಡಲು ಕಣ್ಣೀರುಂಟು  
ಬುಟ್ಟಿಯಲಿ, ಕೊಳ್ಳುವಿರೇನು?  
ಮೆಲ್ಲನೊಬ್ಬಳು ಉಸುರಿದಳು  
ನಾನಿದ್ದೇನೆ!  
ಬದಲಿಗೆ ಏನು ಕೊಡುವೆ?  
ಇನ್ನೇನೂ, ಕಣ್ಣೀರೆ!  
ಇರಲಿ ನಿನ್ನ ಬಳಿಯೇ  
ನಾ ಒಲ್ಲೆ, ಬೆನ್ನು ತಿರುಗಿಸಿ  
ಹೊರಟೇ ಬಿಟ್ಟಳು.

ಓ! ನಿಲ್ಲೆ ಚಿರುಸು ನಡಿಗೆಯವಳೇ  
ಕರೆದಳೊಂದು ಹೆಣ್ಣು  
ತಂದಿದ್ದೇನೆ ಹಿಂತಿರುಗಿ ಒಯ್ಯುವೆ?  
ಹೇಗೂ ತಂದಿದ್ದೀಯಾ  
ಎಲ್ಲರದೂ ಸೇರಿಸಿ ಗುಡ್ಡೆ ಹಾಕು.  
ಒಡಲಿನ ಉರಿಗ ಕಾದರೆ  
ಆವಿಯಾಗಿ ಕಣ್ಣಾದೀತು.  
ತಿರುಗಿ ಬಂದಳು

ಏನೆ? ನಿನ್ನೊಡಲ ಉರಿ  
ಕನ್ನಡಿಯಲ್ಲೊಮ್ಮೆ ಮುಖ ನೋಡಿಕೊ  
ಇಲ್ಲ ಕುರಾನಿನೊಳಗೆ ನೋಡಿಕೊ  
ಕತ್ತಲಿದ್ದರೇನು? ತಡಕಲು ಕೈಯಿಲ್ಲವೆ?  
ಬೆರಳಾಡಿಸು ಗೋಡೆಗಳ ಮೇಲೆ  
ಏನಾದರೂ ಸಿಕ್ಕೀತು.  
ಒಡಲುರಿಯಿಂದ, ಕತ್ತಲ ಎದೆಯೊಳಗೆ  
ದೀಪ ಹಚ್ಚೆ  
ಎಂದಾದರೊಂದು ದಿನ  
ದೀಪಾವಳಿ ಕಂಡೀಯಾ.

ದು. ಸರಸ್ವತಿ.

# ಮಹಿಳೆ ಎಚ್ಚೆತ್ತುವ ದಿನಗಳು ಬರಬೇಕಾಗಿದೆ

ನಮ್ಮ ರಾಷ್ಟ್ರದ ಜನಸಂಖ್ಯೆಯಲ್ಲಿ ಶೇ. ೫೦ ರಷ್ಟು ಮಹಿಳೆಯರು ಇರುವಾಗ, ಮಹಿಳೆಯರ ಏಳಿಗೆಯಾಗದೇ, ಅವರ ವ್ಯಕ್ತಿತ್ವ ವಿಕಸನಗೊಳ್ಳದೆ ಅದರಲ್ಲೂ ಗ್ರಾಮೀಣ ಮಹಿಳೆಯರ ಸರ್ವತೋಮುಖ ಅಭಿವೃದ್ಧಿಯಾಗದೆ ರಾಷ್ಟ್ರದ ಪ್ರಗತಿಯಾಗಲೀ ಮಹಿಳೆಯರಿಗೆ ಸಮಾನ ಸ್ಥಾನಮಾನವಾಗಲೀ ದೊರಕುವುದು ಅಸಾಧ್ಯವೆನಿಸುತ್ತದೆ.

ನಮ್ಮ ದೇಶದ ಇಂದಿನ ಪ್ರಸ್ತುತ ರಾಜಕೀಯ ವಿಚಿತ್ರ ನಿಲುವಿನಲ್ಲಿದೆ. ಯಾವ ವ್ಯಕ್ತಿಯೇ ಆಗಲಿ, ಪಕ್ಷವಾಗಲಿ ನಾಳೆಗಳ ಕನಸನ್ನು ಕಾಣದಂತೆ ಇಂದಿನ ಪ್ರಸ್ತುತ ಪರಿಸ್ಥಿತಿಗೆ ಸ್ಪಂದಿಸಿ ತನ್ನ ನಿಲುವನ್ನು ತಾಳುತ್ತಿರುವುದರಿಂದ, ಯಾರ ಮೇಲೆಯೂ ಭರವಸೆಯನ್ನಿಟ್ಟುಕೊಳ್ಳುವಂತಿಲ್ಲ. ಇಂತಹ ರಾಜಕೀಯ ಪರಿಸ್ಥಿತಿಯಲ್ಲಿ ಈ ದೇಶದ ಚುನಾವಣೆಗಳಲ್ಲಿ ತಪ್ಪದ ಮತ ಚಲಾಯಿಸುತ್ತಿರುವ ಮಹಿಳೆಯರಿಗೆ ಮತ ಚಲಾಯಿಸುತ್ತಿರುವ ಹಕ್ಕಿನ ಬಗೆಗೆ ಅಥವಾ ಚುನಾವಣೆಯಲ್ಲಿ ಆರಿಸಿ ಬರುವ ವ್ಯಕ್ತಿಗಳು ತಮ್ಮ ಕರ್ತವ್ಯಗಳನ್ನು ಮರೆತು, ತಮ್ಮ ಸ್ಥಾನ ಭದ್ರತೆಗಾಗಿ ಕ್ಷುಲ್ಲಕ ಕಾರಣಗಳಿಗೆ ಓಗೊಟ್ಟು ದೇಶದ ಅಭದ್ರತೆಗೆ ಕಾರಣವಾಗುತ್ತಿರುವುದರ ಬಗ್ಗೆ ಇಂದು ಹೆಚ್ಚು ಯೋಚಿಸಬೇಕಾಗಿದೆ. ಎಚ್ಚೆತ್ತುಕೊಳ್ಳಬೇಕಾಗಿದೆ. ಹಾಗೆಯೇ ಹೆಚ್ಚಿನ ಸಂಖ್ಯೆಯಲ್ಲಿ ಮಹಿಳೆಯರು ರಾಜಕೀಯ ಪ್ರವೇಶ ಮಾಡಬೇಕಾಗಿದೆ. ಅಂದರೆ ಈಗಾಗಲೇ ಜಿಲ್ಲಾ ಪರಿಷತ್ತುಗಳಲ್ಲಿ ಆಯ್ಕೆಯಾಗಿರುವ ಬಹುತೇಕ (ಕೆಲವರು ಅಪವಾದವಾಗಿರುವವರು) ಮಹಿಳೆಯರು ಕೇವಲ ನಿರ್ಣಯಗಳಿಗೆ ಕೈ ಎತ್ತುವ ರೀತಿಯಲ್ಲಿಲ್ಲದೆ, ಆರ್ಥಿಕ, ಸಾಮಾಜಿಕ ರಾಜಕೀಯ ಪರಿಸ್ಥಿತಿಯ ಬಗ್ಗೆ ಜ್ಞಾನವನ್ನು ವೃದ್ಧಿಸಿಕೊಂಡು, ಸಮಸ್ಯೆಗಳನ್ನು ಸಮರ್ಪಕವಾದ ರೀತಿಯಲ್ಲಿ ಅರ್ಥ ಮಾಡಿಕೊಂಡು ತಮ್ಮ ನಿಲುವನ್ನು ತಾಳಬೇಕು. ಸರ್ಕಾರ ಕೈಗೊಳ್ಳುವ ಕಾರ್ಯಯೋಜನೆಗಳಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳಬೇಕು. ಸರ್ಕಾರವೂ ಸಹ ಒಬ್ಬರೋ ಅಥವಾ ಇಬ್ಬರೋ ಮಹಿಳೆಯರಿಗೆ ಸಚಿವ ಸ್ಥಾನಕೊಟ್ಟು ಕೈ ತೊಳೆದುಕೊಳ್ಳಬಾರದು. ಬಹುಶಃ ಹೆಚ್ಚಿನ ಸಂಖ್ಯೆಯಲ್ಲಿ ಮಹಿಳೆಯರಿಗೆ ಸಚಿವ ಸ್ಥಾನವನ್ನು ಕೊಟ್ಟರೆ, ಅವರುಗಳು ದಕ್ಷತೆಯಿಂದ ಉತ್ತಮ ರೀತಿಯಲ್ಲಿ ಕಾರ್ಯಭಾರ ನಡೆಸುತ್ತಾರೆನ್ನುವುದರಲ್ಲಿ ಸಂಶಯವಿಲ್ಲ. ಇಂದು ಎಲ್ಲ ವಲಯದಲ್ಲೂ ಎಲ್ಲಾ ಸ್ತರದಲ್ಲಿಯೂ ವೃಥಾ ಕಾಲಹರಣ ಮಾಡದೆ, ದಕ್ಷತೆಯಿಂದ, ಸಮಯಕ್ಕೆ ಸರಿಯಾಗಿ ಕೆಲಸಗಳು ನಿರ್ವಹಿಸುತ್ತಾ, ಯಾವ ಆಮಿಷಕ್ಕೂ ಒಳಗಾಗದೆ ಕಾರ್ಯ ನಿರ್ವಹಿಸುತ್ತಿರುವ ಅನೇಕ ಮಹಿಳೆಯರು ಇದಕ್ಕೆ ಉದಾಹರಣೆ ಎನ್ನಬಹುದು. ಹೀಗಿರುವಾಗ ರಾಜಕೀಯ ಪಕ್ಷಗಳು ಸಹ ಸುಶಿಕ್ಷಿತ ಮಹಿಳೆಯರನ್ನು ಹೆಚ್ಚಿನ ಸಂಖ್ಯೆಯಲ್ಲಿ ತಮ್ಮ ಪಕ್ಷಗಳ ಮೂಲಕ ಚುನಾವಣೆಯ ಸ್ಪರ್ಧೆಯಲ್ಲಿ ಭಾಗವಹಿಸುವಂತೆ ಉತ್ತೇಜಿಸಬೇಕು. ಹೆಚ್ಚಿನ ಸಂಖ್ಯೆಯಲ್ಲಿ ಜಿಲ್ಲಾ ಪರಿಷತ್ತಿನಿಂದ ಹಿಡಿದು ವಿಧಾನಸಭೆ, ರಾಜ್ಯಸಭೆಯಲ್ಲಿ ಮಹಿಳೆಯರು ಆಯ್ಕೆಯಾದರೆ, ಇಂದು ಉದ್ಭವಿಸುತ್ತಿರುವ ರಾಜಕೀಯ ಅಸ್ಥಿರತೆ ತಲೆದೋರದೆ ಸುಭದ್ರತೆ ನೆಲೆಯಾಗಬಹುದೆನಿಸುತ್ತದೆ.

ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಿದ ಅಸಂಖ್ಯಾತ ಗ್ರಾಮೀಣ ಮಹಿಳೆಯರ ತ್ಯಾಗ, ಬಲಿದಾನಕ್ಕೆ ಯಾವ ಬೆಲೆಯೂ ಇಲ್ಲವೇ? ಜಗತ್ತಿನ ಯಾವ ದೇಶದಲ್ಲೂ ಸಹ ನಮ್ಮ ದೇಶದಲ್ಲಿ ಸ್ವಾತಂತ್ರ್ಯದ ಚಳವಳಿಯಲ್ಲಿ ಮಹಿಳೆಯರು ಭಾಗವಹಿಸಿದಷ್ಟು ಭಾಗವಹಿಸಿಲ್ಲ. ಹೀಗಿದ್ದೂ ಸಹ ಇಂದಿಗೂ ಸಹ ನಮ್ಮ ಗ್ರಾಮೀಣ ಪರಿಸರದಲ್ಲಿ ಜೀವಿಸುತ್ತಿರುವ ಮಹಿಳೆಯರಲ್ಲಿ ಎಷ್ಟೋ ಜನರು ಅವರ ಮನೆಯ ಹೊಸಿಲು ದಾಟದವರಿದ್ದಾರೆ. ಬುರ್ಖಾ ಪರದೆಯ ಹಿಂದೆಯೇ ಜೀವಿಸುವವರಿದ್ದಾರೆ. ಅಡಿಗೆ ಮನೆಯಲ್ಲಿಯೇ ಹಸಿ ಸೌದೆಯಲ್ಲಿ ಅಡಿಗೆ ಮಾಡುತ್ತಾ ಪೌಷ್ಟಿಕ ಆಹಾರ ದಕ್ಕದೇ, ಆರೋಗ್ಯ ಕೆಡಿಸಿಕೊಳ್ಳುತ್ತಾ ಮನಸ್ಸಿನ ಅಂಗಳವನ್ನು ನೋಡದೆಯೇ

ಬದುಕುತ್ತಿರುವ ಮಹಿಳೆಯರಿದ್ದಾರೆ. ಹೊತ್ತಾರೆ ಎದ್ದು ರೊಟ್ಟಿಬುತ್ತಿ ಮಾಡಿಕೊಂಡು, ಹೊಲಗಳಲ್ಲಿ ದುಡಿಯುವ ಅನೇಕ ಮಹಿಳೆಯರಿಗೆ, ಸುಖ-ಸಂತೋಷ ಪಡೆಯುವ ಕಲ್ಪನೆ ಇದೆಯೇ, ಸಮಯ ವಿದೆಯೇ, ಹೋಗಲಿ ಶ್ರಮದ ಬದುಕಿಗೆ ತಕ್ಕಂತೆ ಅವರಿಗೆ ಹೊಟ್ಟೆ ತುಂಬ ಉಣ್ಣಲು ಆಹಾರವಿರುತ್ತದೆಯೇ? ಈಗಲೂ ಕೆಲವು ಹಳ್ಳಿಗಳಲ್ಲಿ ಮಕ್ಕಳನ್ನು ಹೆರುವ ಸಮಯದಲ್ಲಿ ತಮ್ಮ ಹಟ್ಟಿಗಳಿಂದ ದೂರ ಕಳಿಸುವ ವ್ಯವಸ್ಥೆಯಿಲ್ಲವೇ, ಇನ್ನು ಸಾಕ್ಷರತೆ ಎನ್ನುವುದು ಅವರುಗಳಿಗೆ ಗಗನದಲ್ಲಿ ಹಾರುವ ವಿಮಾನದಂತೆ,

ಕೇವಲ ಸರ್ಕಾರ ಪ್ರತಿವರ್ಷವೂ ಆಯವ್ಯಯದಲ್ಲಿ ಕೋಟಿಗಟ್ಟಲೆ ಹಣವನ್ನು ಕಾದಿರಿಸಿದರೆ ಆಯಿತೇ, ಅದು ಸಮರ್ಪಕವಾದ ರೀತಿಯಲ್ಲಿ ಕಾರ್ಯ ನಿರ್ವಹಿಸಿದ್ದರೆ, ಈ ಹೊತ್ತಿಗೆ ನಮ್ಮ ದೇಶದಲ್ಲಿ ಎಲ್ಲರೂ ಸುಶಿಕ್ಷಿತರಾಗಬಹುದಿತ್ತು. ನಮ್ಮ ಮಹಿಳೆಯರಿಗೆ ವೈಚಾರಿಕ ತಿಳುವಳಿಕೆ ಮೂಡಿಸುವಂತಹ, ಸಂಘಟಿಸುವಂತಹ ಕೆಲಸ ಇನ್ನೂ ತೀವ್ರಗತಿಯಲ್ಲಿ ಆಗಬೇಕಾಗಿದೆ. ಕೇವಲ ಚುನಾವಣೆ ಬಂದಾಗ ಸ್ತ್ರೀ ಶಕ್ತಿಯು ನೆನಪಾಗುವ ನಮ್ಮ ರಾಜಕೀಯ ಧುರೀಣರಿಗೆ, ಆ ಹೆಣ್ಣು ಮಕ್ಕಳು ಮೈಲಿ ದೂರದಿಂದ ಕಂಕುಳಲ್ಲಿ ಮಗುವಿಟ್ಟುಕೊಂಡು ತಲೆಯ ಮೇಲೆ ನೀರನ್ನು ಹೊತ್ತು ತರುವ, ಸೌದೆಗಾಗಿ ಕಾಡಿನಲ್ಲಿ ಅಲೆಯುವ ಶ್ರಮದ ಬದುಕು ನಿರ್ವಹಿಸುತ್ತಿರುವುದರ ಅರಿವಾಗುವುದು ಯಾವಾಗ?

ಇನ್ನು ಮುಂದೆಯಾದರೂ ಮಹಿಳೆಯರು ಎಚ್ಚೆತ್ತುಕೊಂಡು ಸಮಾಜದಲ್ಲಿ ಆಗುತ್ತಿರುವ ಬದಲಾವಣೆಗಳಿಗೆ ಸ್ಪಂದಿಸುತ್ತಾ ಹೆಚ್ಚಿನ ಸಂಖ್ಯೆಯಲ್ಲಿ ರಾಜಕೀಯ ಪ್ರವೇಶ ಮಾಡದ ಹೊರತು ಹಾಗೂ ಅವರವರ ಮನೆಗಳಲ್ಲಿ ಕೈಗೊಳ್ಳುವ ನಿರ್ಧಾರಗಳಲ್ಲಿ ತಮ್ಮ ಧ್ವನಿ ಎತ್ತದ ಹೊರತು ಈ ದೇಶದಲ್ಲಿ ಮಹಿಳೆಯರ ಸ್ಥಾನ-ಮಾನವಾಗಲೀ ಅಥವಾ ಜೀವನ ರೀತಿಯಲ್ಲಿ ಯಾವ ಬದಲಾವಣೆ ಕೂಡ ಬರುವುದಿಲ್ಲ.

ಅಂದನೂರು ಶೋಭ.

೧)

## ತೋರಿಕೆ

ಕುಂಚ ಬಡಿಸಿದ ಕಣ್ಣೀರು
ನೋಡಿ
ವ್ಯರ್ಥ
ಬೇಡ
ನಿನ್ನ ಕಣ್ಣೀರು
ಗಂಗೆಯಲಿ ಮುಳುಗಿದಳು
ಪತ್ರಿಕೆಯ ಸುದ್ದಿ
ಅಹಾ! ಕನಿಕರದ ಪೂರ
ಅದೇ ಈಜಿ
ದಡ ಸೇರಿದವಳ ಬಗೆಗೆ
ಗಂಗೆ ರಾಡಿಯಾಯಿತೆಂಬ
ದೂರು
ಸಾಕು ದಾರ ಪೋಣಿಸಬೇಡ

೨)

## ಬಂಧಿ

ಕುದುರೆ ಹುಳುವೊಂದು
(ಹೇಗೆ ಬಂದಿತ್ತೋ ಇಲ್ಲಿಗೆ)
ಕುಪ್ಪಳಿಸುತ್ತಾ ಹೇಳಿತು
ಅಯ್ಯೋ ನೀನು ಬಂಧಿ
ಮುಚ್ಚಿದ್ದ ನಾಲ್ಕು
ಗೋಡೆಗಳನ್ನು
ನೋಡುತ್ತಾ ಹೇಳಿದೆ
ಈಗ ನೀ ಏನಾದಿ?

ಭಾಗ್ಯ ಜಯ ಸುದರ್ಶನ.

# ಸ್ತ್ರೀ-ಸಂಚಯ

## ಸರಸಮ್ಮನ ಸಮಾಧಿ

ಲೇ.: ಡಾ. ಶಿವರಾಮ ಕಾರಂತ
ಪ್ರ.: ಐ. ಬಿ. ಎಚ್. ಪ್ರಕಾಶನ

**ಸುನಾಲಿನಿಯ** ಯೋಚನೆ ತನ್ನ ಕಡೆಗೆ ಮಾತ್ರವಲ್ಲ, ತನ್ನಂತಿರುವ ಉಳಿದ ಹೆಂಗಸರು 'ಸುಖಿಯಾಗಿದ್ದಾರೆಯೇ-ಎಂಬ ಕಡೆಗೂ ಹರಿಯಿತು. ಎಷ್ಟೊ ಮನೆಯಲ್ಲಿ ಸಖಿಗಳೆಂಬಂತೆ ಚಿನ್ನ, ಸೀರೆ ತೊಟ್ಟು ಸ್ತ್ರೀಯರು ತಿರುಗುತ್ತಾರೆ. ಗಂಡಂದಿರು ಮನೆಯ ಹೊರಗೇನೇ ಇರುತ್ತಾರೆ. ಅವರ ಸಾಹುಕಾರ ಕುಲದಲ್ಲಿ ಅದಕ್ಕೆ ಆಕ್ಷೇಪ ಕಡಿಮೆಯೆಂಬುದು ನಿಜ. ಅವಳ ತಂದೆಯು ಊರಿನಲ್ಲಿ ಎಷ್ಟು ಗೆಳೆಯರ ಮನೆಯನ್ನು ಅವಳು ನೋಡಿಲ್ಲ! ಗಂಡಸರ ಜಾತಿ ಸಂಜೆ ಹತ್ತು ಗಂಟೆಗೇನೇ ಬರುವುದು. ಮಧ್ಯಾಹ್ನ ಗಂಡ ಹೆಂಡಿರಲ್ಲಾಗುವುದು "ಶಂತಿ ಮುಲಾಖಿತ್" ಅದು ಊಟಕ್ಕೆ ಮಾತ್ರ. ಹೆಂಗಸರ ಕೆಲಸ ಅಡುಗೆ ಗಿಡುಗೆಯಾಯಿತೆಂದರೆ ನೆರೆ ಮನೆಗೆ ತಾವು ಹೋಗುವುದು ಇಲ್ಲವಾದರೆ ತಮ್ಮ ಮನೆಗೆ ನೆರೆಮನೆಯವರನ್ನು ಆಮಂತ್ರಿಸುವುದು. ಅಲ್ಲಿಂದ ಜನಾರ್ದನ ಕಛೇರಿ ಶುರು. "ಅವರ ಮನೆಯಲ್ಲಿ ಹೀಗೆ ಅವಳನ್ನು ಗಂಡ ಬಿಟ್ಟನಂತೆ, ಇವಳು ಗಂಡನನ್ನು ಬಿಟ್ಟಳಂತೆ..........." ಕಿವಿಗೆ ಜಿಗುಪ್ಸೆ ಬರುವಷ್ಟು ಇದೇ ಸುದ್ದಿ. ಆದರೂ ಯಾರೂ ಅತೃಪ್ತರಂತೆ ಕಾಣುವುದಿಲ್ಲ. ತಮ್ಮ ವಿಷಯದಲ್ಲಿ ಸುಖವನ್ನು ಅನುಭವಿಸುತ್ತಾರೇನು? ಇವರೊಡನೆ ತನ್ನನ್ನು ಹೋಲಿಸಿದರೆ ತಾನೊಬ್ಬಳೇ ದುಡುಕಿ ಎನಿಸಬಹುದು.

ಇಲ್ಲವೇ ನೂರಾರು ಸ್ತ್ರೀಯರಂತೆ ನಾನೂ ಸಹ "ಇದು ವಿಧಿ" ಎಂದುಕೊಳ್ಳಲೆ? ಗಂಡ ಹೆಂಡಿರಿಬ್ಬರೂ ಬಾಯ್ತೆರೆದರೆ ಜಗಳ ಇಲ್ಲವಾದರೆ "ಥೂ ತೆಕ್ತ........ ಥೂ ಹೇಸಿ" ಯೆಂದರೂ ಮೌನದಿಂದ ಕೇಳುವವರಿದ್ದಾರೆ. ಪಾತಿವ್ರತ್ಯ ಹಾಗಿರುವುದೋ ಏನೋ, ಪ್ರಾಯಶಃ ಹೆಂಗುಸಿಗೆ ಅಭಿಮಾನವೆಂಬುದಿರಬಾರದು. ಅವಳು ತಾನೆಂಬುದನ್ನು ಅಳಿಸಿರಬೇಕು. ಮದುವೆಯಾದ ಬಳಿಕ ತಾನು, ತನ್ನ ಮನುಷ್ಯತ್ವ ಇವೆಲ್ಲವನ್ನು ಗಂಡನ ಕಾಲು ತುಳಿತಕ್ಕೆ ಬಲಿಕೊಡಬೇಕು. ಹಾಗೆ ಮಾಡಿದರೆ ಕತ್ತೆ, ನಾಯಿ, ಕೋತಿಯೆಂದು ಯಾವ ಬೈಗಳನ್ನು ಸಹಿಸಬಹುದು, ಒದೆಯನ್ನೂ ತಾಳಬಹುದು. ಅಷ್ಟು ನೀಡೆಯಿಂದ ಕಂಡ ಸ್ತ್ರೀ ಜಂತು ಉಚ್ಚ ಪೀಠದ ಮೇಲೆ ಕುಳಿತ ಪುರುಷದೇವನಿಗೆ ರಾತ್ರಿ ಕಾಲಕ್ಕೆ ಅನಿವಾರ್ಯ. ಭೂತಕ್ಕೆ ಸುಳಿದೆಸೆಯುವ ಕೋಳಿಯಂತೆ, ಕಾಮಕ್ಕೆ ಸುಳಿದೆಸೆಯುವ ಕೋಳಿ ಹೆಣ್ಣಲ್ಲವೆ?

ತಾನು ಇಂಗ್ಲಿಷ ಕಲಿತವಳೆಂದು ಗಂಡನಿಗೆ ತನ್ನಲ್ಲಿ ಇಷ್ಟು ಸಿಟ್ಟೆ? . ಕಲಿತರೇನು? ಬೇರೆಯವರು ಕಲಿತಿಲ್ಲವೆ? ಕಲಿತು ಇದಕ್ಕೂ ಚೆನ್ನಾಗಿ ತಮ್ಮನ್ನು ಮರೆತು ದಾಂಪತ್ಯ ನಡೆಯಿಸುತ್ತಲಿಲ್ಲವೇ? ಮದುವೆಯಾದ ಮೇಲೆ ತಮಗೆ ಬಾಯಿಲ್ಲ. ಅಧಿಕಾರವಿಲ್ಲ. ಬೇರೆ ಮದುವೆಯಾಗುವಂತಿಲ್ಲ. ಆದುದರಿಂದ ಈ ಆಮರಣಾಂತ ಶಿಕ್ಷೆಯನ್ನು ಸ್ವೀಕರಿಸಬೇಕು.... ನಿಜ........ ದಾಂಪತ್ಯವೆಂದರೆ ಎರಡು ಜೀವಿಗಳ ಸ್ವಾರಸ್ಯದ ಮಿಲನ. ಅವು ತಿಕ್ಕಾಡಬಾರದು. ಅವು ಹೊಂದಿಕೊಳ್ಳಬೇಕಾದರೆ ಮನಸ್ಸು ಹೊಂದಿಕೊಳ್ಳಬೇಕು, ಅದಕ್ಕೆ ಮನಸ್ಸು ಬೆಳೆಯಬೇಕು, ಒಬ್ಬರು ಇನ್ನೊಬ್ಬರ ಮನಸ್ಸು ಏನೆಂದು ತಿಳಿಯಬೇಕು. ಆದರೆ ಮನಸ್ಸಿಗಿಂತ ಮಾಂಸಕ್ಕೆ ಬೆಲೆಕೊಡುವ ಮನುಷ್ಯನಿದ್ದಾನೆ ಕಸಾಯಿಖಾನೆಯಲ್ಲಿ. ಆಗ ಯಾರಾದರೊಬ್ಬರು ವಿಧೇಯರಾಗಬೇಕು. ಎಂದರೆ ಪಾತಿವ್ರತ್ಯದ ಹೆಸರಿನಲ್ಲಿ ಪರಂಪರೆ, ಅಂಧ ಶ್ರದ್ಧೆಗಳ ಅಫೀಮನ್ನು ಮೆದ್ದು ತಾವು ಜೀವನ್ಮೃತರಾಗಬೇಕು. ಅವೆ ಅಲ್ಲವೇ ವಿಧೇಯತೆ. ಗಂಡನ ಪ್ರತಿಯೊಂದು

ಅನ್ಯಾಯವನ್ನೂ ಸಹಿಸಿ ಬಾಳ್ವೆ ಮಾಡುವುದೆಂದಾಗ... ನಿಜ, ದಾಂಪತ್ಯದ ಒಂದು ಭಾಗ ಅಭಿಮಾನ ಶೂನ್ಯವಾದರೆ ಆಗ ದಾಂಪತ್ಯ ಸುಖವಾಗಿ ಸಾಗುತ್ತದೆ. ಪತಿಗೇನು ಬೇಕು? ಪತ್ನಿಯ ಮನಸ್ಸಲ್ಲ. ತನ್ನ ಕಾಮಕ್ಕೆ ಬಲಿಕೊಡಲು ಮಾಂಸ ಬೇಕು. ಅದನ್ನು ಒಪ್ಪಿಸಿದರಾಯಿತೆಂದು ನೆನೆಯುತ್ತ ನಕ್ಕಳು.

## ಪಂಡಿತ ತಾರಾನಾಥ

ಲೇ.: ಪ್ರೊ. ಎಮ್ ಧ್ರುವನಾರಾಯಣ
ಪ್ರ.: ಕನ್ನಡ ಅಧ್ಯಯನ ಪೀಠ
ಪಠ್ಯ ಪುಸ್ತಕ ನಿರ್ದೇಶನಾಲಯ

ಸ್ವಾತಂತ್ರ್ಯ ಸಂಗ್ರಾಮದಲ್ಲಿ ಸ್ತ್ರೀಯರ ಪಾತ್ರವು ಅಪಾರವಾದುದೆಂದು ಪ್ರತಿಪಾದಿಸಿದವರಲ್ಲಿ ತಾರಾನಾಥರೂ ಒಬ್ಬರು. ಸ್ತ್ರೀಯರ ಉನ್ನತಿಗಾಗಿ ಹೋರಾಡಿದ ತಾರಾನಾಥರಿಗೆ; ಕರ್ನಾಟಕದ ರಾಜಾರಾಮ ಮೋಹನರಾಯರೆಂದರೆ ಅತಿಶಯೋಕ್ತಿಯೇನೂ ಆಗಲಾರದು. ಸಾಮಾಜಿಕ, ಆರ್ಥಿಕ ರಾಜಕೀಯ ರಂಗಗಳಲ್ಲಿ ಸ್ತ್ರೀಯರಿಗೂ ಸಮಾನಾಧಿಕಾರ ಇರಲೇಬೇಕೆಂದು ಪ್ರತಿಪಾದಿಸಿದ್ದರು. ಸ್ತ್ರೀಯರ ಪುರೋಭಿವೃದ್ಧಿಗೆಂದೇ ಅವರು ತಮ್ಮ "ಪ್ರೇಮ" ಪತ್ರಿಕೆಯಲ್ಲಿ ಲೇಖನಗಳನ್ನು ಬರೆದು ಮಹಿಳೆಯರಲ್ಲಿ ಜಾಗೃತಿಯನ್ನುಂಟು ಮಾಡಿದರು. ಮಹಿಳೆಯರ ಬಗ್ಗೆ ಸಹಾನುಭೂತಿ ತೋರಿದವರು.

"ಸಂಪ್ರದಾಯಗಳ ಮಾತ್ರವೇ ಸಮಾಜದಲ್ಲಿ ಸಂಪೂರ್ಣ ಅಧಿಕಾರ ನಡೆಸುತ್ತಿರುವ ಈ ದಿನಗಳ ವ್ಯವಹಾರದಲ್ಲಿ, ಹೆಂಗಸಿನಷ್ಟು ತೊಂದರೆಗೊಳಪಟ್ಟವರು ಯಾರೂ ಇಲ್ಲ ಹೆಂಗಸೆಂಬ ಶಬ್ದವೇ ಅಯೋಗ್ಯ–ಮೂರ್ಖ ಮತ್ತು ಹೇಡಿತನಗಳ ಪರ್ಯಾಯ ಶಬ್ದವಾಗಿ ಹೋಗಿದೆ. ಎಂಥಹ ಅವನತಿಯ ಸೂಚನೆ ಇದು".

"ಪರಕೀಯರ ಹಾವಳಿಯಂಥ ಅನೇಕ ಅನಿರೀಕ್ಷಿತ ಪ್ರಸಂಗಗಳ ಪರಿಣಾಮದಿಂದ ಹಿಂದೂ ಸಮಾಜವು ಹಲವು ಹೊಸ ಸಂಪ್ರದಾಯಗಳನ್ನು ರೂಢಿಗೆ ತರಬೇಕಾಯಿತು. ಬಾಲ್ಯವಿವಾಹ ಮತ್ತು ವಿಧವಾ ಖಂಡನ ಇವೆರಡೂ ಹಿಂದೂಗಳಲ್ಲಿ ಆಪದ್ಧರ್ಮವಾಗಿ ರೂಢಿಗೆ ಬಂದವೆಂದು ಅನೇಕರ ಮತ. ಆದರೆ ಒಮ್ಮೆ ಆಪದ್ಧರ್ಮವಾಗಿ ರೂಢಿಗೆ ಬಂದವು ನಿಜ. ಪರಕೀಯರ ಭಯವು ನಿಂತು ಹೋದ ಮೇಲೆ ಇಂತಹ ಆಪದ್ಧರ್ಮವನ್ನು ಸುಟ್ಟು ಬಿಡಬೇಕಿತ್ತು. ಆದರೆ ಇವು ಇನ್ನೂವರೆಗೂ ಸ್ಥಿರವಾದ ಸಂಪ್ರದಾಯಗಳಂತೆ ಗಟ್ಟಿಯಾಗಿ ಹಿಡಿಯಲ್ಪಟ್ಟು ಹುಡುಗಿಯರ ಸರ್ವನಾಶ ಮಾಡುವುದಲ್ಲದೆ, ಸಮಾಜದ ಕಟ್ಟನ್ನೂ ದುರ್ಬಲಗೊಳಿಸುತ್ತವೆ."

"ಹಿಂದೂ ಸಮಾಜದಲ್ಲಿ ದಾಂಪತ್ಯ ವಿಚ್ಛೇದನೆ" ಎಂಬ ಉಗ್ರಲೇಖನವನ್ನು ಬರೆದ ಇವರು ಬಹು ಟೀಕೆಗೆ ಗುರಿಯಾದರು. ಆದರೆ ಯಾರಿಗೂ ಅಂಜದ ಇವರು "ಹಿಂದು ವಿವಾಹವೆಂಬ ಬಲೆಯಲ್ಲಿ ಸಿಕ್ಕಿಬಿದ್ದ ಹೆಂಗಸು ಮಾತ್ರ ಬಂಧನ ಮುಕ್ತಳಾಗಬೇಕೆಂದು" ವಾದಿಸಿದರು ಮತ್ತು ಸಾಧಿಸಿದರು.

"ಜನಾಂಗದ ತಾಯಂದಿರೂ, ಹೆಂಡರೂ ಈ ರೀತಿ ದಾಸ್ಯ ಪಾಶದಿಂದ ಬಂಧಿಸಲ್ಪಟ್ಟಿರುವವರೆಗೂ, ಆ ರಾಷ್ಟ್ರಕ್ಕೆ ಸ್ವತಂತ್ರವಾಗಿ ಪ್ರಸಿದ್ಧಿ ಹೊಂದುವ ಆಶೆ ಎಲ್ಲಿಂದ ಬರಬೇಕು? ಮೇಲೆ ಮೇಲೆ ಮಾಡುವ ಸುಧಾರಣೆಗಳು ಹೆಂಗಸಿನ ಸಂಕಟದ ಆಳವನ್ನು ಅರಿಯಲಾರವು........ಹೆಂಗಸು ಅಸಹಾಯಕಳಾಗಿ, ಪರಾವಲಂಬನದಲ್ಲಿ ನಿಂತು, ಪಾರತಂತ್ರ್ಯ ಜೀವನವೇ ತನ್ನ ಸಕಲ ಅನುಭವವಾಗಿರುವಾಗ, ತನ್ನ ಮಕ್ಕಳಲ್ಲಿ ಈಕೆಯು ಯಾವ ಹೆಚ್ಚಿನ ಆದರ್ಶ ಸ್ಫೂರ್ತಿಗಳನ್ನು ಸ್ಥಿರಗೊಳಿಸಬಲ್ಲಳು?"

# ಸುದ್ದಿ ಸಂಕಲನ

## ಹಿಮಾಚಲ ಪ್ರದೇಶದಲ್ಲಿ ಹೆಚ್ಚುತ್ತಿರುವ ಸ್ತ್ರೀ ಪ್ರಮಾಣ

ಭಾರತದಲ್ಲಿ ಪ್ರತಿ ಸಾವಿರ ಸಂಖ್ಯೆಗೆ 929 ಮಂದಿ ಮಹಿಳೆಯರಿದ್ದಾರೆ. ಹಿಮಾಚಲ ಪ್ರದೇಶದಲ್ಲಿ ಪ್ರತಿ ಸಾವಿರ ಪುರುಷರಿಗೆ 996 ಮಂದಿ ಸ್ತ್ರೀಯರಿದ್ದಾರೆ. ಸ್ತ್ರೀಯರ ಪ್ರಮಾಣ ಹೆಚ್ಚು ಹೊಂದಿರುವ ರಾಜ್ಯ ಎಂಬ ಹೆಗ್ಗಳಿಕೆಯಲ್ಲಿ ಕೇರಳ ಪ್ರಥಮ ಸ್ಥಾನದಲ್ಲಿದ್ದರೆ ಎರಡನೇ ಸ್ಥಾನ ಹಿಮಾಚಲ ಪ್ರದೇಶ ಪಡೆದಿದೆ. ಕರ್ನಾಟಕ, ಆಂಧ್ರಪ್ರದೇಶ, ಗೋವಾ, ಕೇರಳ, ಮಧ್ಯಪ್ರದೇಶ, ತಮಿಳುನಾಡು ಮತ್ತು ಲಕ್ಷದ್ವೀಪಗಳಲ್ಲಿ ಹೆಂಗಸರ ಪ್ರಮಾಣ ರಾಷ್ಟ್ರೀಯ ಪ್ರಮಾಣಕ್ಕಿಂತ ಹೆಚ್ಚು. ಉಳಿದ ರಾಜ್ಯಗಳಲ್ಲಿ ಗಂಡಸರ ಪ್ರಮಾಣ ಹೆಚ್ಚು.

## ಅನ್ಯಾಯದ ಗಳಿಕೆ ಒಲ್ಲದ ಪತ್ನಿ

"ಈ ಹಣವನ್ನು ನನ್ನ ಪತಿ ಅನ್ಯಾಯ–ಅಕ್ರಮದಿಂದ ಸಂಪಾದಿಸಿದ್ದರಿಂದ ಅದನ್ನು ಹೊರಗೆಸೆದೆ" ಎಂದು ಪೋಲೀಸರಿಗೆ ಹೇಳಿಕೆ ನೀಡಿ, ತನ್ನ ಪತಿ ತಂದಿರುವ ಹಣದ ಬಗ್ಗೆ ತನಿಖೆ ನಡೆಸಿ ಸತ್ಯ ತಿಳಿಸಲು ಕೋರಿದ್ದಾಳೆ ರೋಂನ ಗೃಹಿಣಿಯೊಬ್ಬಳು. ತನ್ನ ಮನೆಯ ಬಾಲ್ಕನಿಯಿಂದ 130 ಲಕ್ಷ ಲಿರ್ (ಸುಮಾರು 10,000 ಡಾಲರ್) ಹಣವನ್ನು ಬೀದಿಗೆಸೆದ ಆರೋಗ್ಯಾಧಿಕಾರಿಯೊಬ್ಬನ ಪತ್ನಿಯಾಗಿರುವ ಆಕೆ "ಹಣ ಬಂದ ಮೂಲ" ದ ಬಗ್ಗೆ ಸತ್ಯ ಸಂಗತಿ ತಿಳಿಯಲು ಬಯಸಿದ್ದಾಳೆ.

## ಸಮರ್ಥೆಯರ ಗಳಿಕೆ ಏಕೆ ಹಿಂದೆ?

ಅಮೇರಿಕದ ದೇಶದಾದ್ಯಂತ ನಡೆಸಿದ ಅಧಿಕೃತ ಸಮೀಕ್ಷೆಯಿಂದ ಕಾಲೇಜುಗಳಲ್ಲಿ ಅಂಕ ಗಳಿಕೆಯಲ್ಲಿ ಸ್ತ್ರೀಯರು ಪುರುಷರಿಗಿಂತ ಮುಂದಿದ್ದಾರೆ, ಆದರೆ ಉದ್ಯೋಗ ರಂಗದಲ್ಲಿ ಹೆಚ್ಚು ಗಳಿಕೆ ಪುರುಷರದೇ ಎಂದು ತಿಳಿದು ಬಂದಿದೆ. ಅಮೇರಿಕದ ಶಿಕ್ಷಣ ಇಲಾಖೆ ಕಾರ್ಯದರ್ಶಿ ಕ್ಲಿಫರ್ಡ್ ಅಡಲ್‌ಮನ್ "ಮಹಿಳೆಯರು ಕಲಿಕೆ ವೇಳೆಯೇ ಅಧಿಕ ಸಾಮರ್ಥ್ಯ ಹೂಡಿಕೆ ಮಾಡಿದ್ದಾರೆ. ಆದರೆ ಪ್ರತಿಫಲ ಸಿಗುತ್ತಿಲ್ಲ" ಎಂದು ಹೇಳುತ್ತಾರೆ. ಅಮೆರಿಕಾದ ನಿರುದ್ಯೋಗಿಗಳಲ್ಲಿ ಸ್ತ್ರೀಯರೇ ಹೆಚ್ಚಿನ ಸಂಖ್ಯೆಯಲ್ಲಿದ್ದಾರೆ.

## ರಾಷ್ಟ್ರದ ಪ್ರಥಮ ಮುಖ್ಯ ನ್ಯಾಯಾಧೀಶೆ

ಹೈಕೋರ್ಟಿನ ಮುಖ್ಯ ನ್ಯಾಯಾಧೀಶರಾಗಿ ಆಗಸ್ಟ್ 5ರಂದು ಅಧಿಕಾರ ವಹಿಸಿಕೊಂಡ ಲೀಲಾಸೇಟ್ ರಾಷ್ಟ್ರದ ಪ್ರಥಮ ಮಹಿಳಾ ಮುಖ್ಯ ನ್ಯಾಯಾಧೀಶೆಯಾಗಿದ್ದಾರೆ. ಹಿಮಾಚಲ ಪ್ರದೇಶದ ಹೈಕೋರ್ಟ್ ನ್ಯಾಯಾಧೀಶರಾಗಿರುವ ಲೀಲಾಸೇಟರಿಗೆ ಪ್ರಮಾಣ ವಚನ ನೀಡಿದವರು ರಾಜ್ಯಪಾಲ ವೀರೇಂದ್ರವರ್ಮ. ಶ್ರೀಮತಿಯವರು ಈ ಮುನ್ನ ದೆಹಲಿ ಹೈಕೋರ್ಟಿನ ನ್ಯಾಯಾಧೀಶೆಯಾಗಿದ್ದರು.

---

ಸಂಪಾದಕರು, ಪ್ರಕಾಶಕರು ಹಾಗೂ ಮುದ್ರಕರು ಎಚ್. ಎಸ್. ರಾಜೇಶ್ವರಿ, ಮಾನವಿ ಮುದ್ರಣಾಲಯ, ಪಂಚಾಯಿತಿ ರಸ್ತೆ, ಕಾಡುಗೋಡಿ ಅಂಚೆ, ಬೆಂಗಳೂರು — ೫೬೦೦೬೭.

Regd No :KRNA271

# ಮಾನಸ

ಮಹಿಳೆಯರ ಮೇಲೆ ನಡೆಯುವ ಅಮಾನವೀಯ ದೌರ್ಜನ್ಯ, ಹಿಂಸೆಗಳನ್ನು ಬೆಳಕಿಗೆ ತರುವುದಕ್ಕಾಗಿ.

ಶೋಷಿತ ವ್ಯವಸ್ಥೆಯನ್ನು, ಅದರ ವಿವಿಧ ರೂಪಗಳನ್ನು ಗುರುತಿಸುವುದಕ್ಕಾಗಿ

ಮಹಿಳೆಯರೊಂದಿಗೆ ಆತ್ಮೀಯ ಅರ್ಥಪೂರ್ಣ ಸಂವಾದಕ್ಕಾಗಿ.

ಮಹಿಳಾ ಆಂದೋಲನದ ಹೊಸ ದಿಕ್ಕುಗಳ ಹುಡುಕಾಟಕ್ಕಾಗಿ.

ವಿಳಾಸ : "ಮಾನಸ"
ಪಂಚಾಯಿತಿ ರಸ್ತೆ
ಕಾಡುಗೋಡಿ
ಬೆಂಗಳೂರು—560067